# ಅಂಕಣ

ಹೆಣ್ಣು, ಶೋಷಣೆ, ಬಂಡಾಯ ಇತ್ಯಾದಿ -
ಒಂದು ಪರಿಶೀಲನೆ

ಕೆ. ಸತ್ಯನಾರಾಯಣ

○ ○ ○

ನೈಸರ್ಗಿಕ ಶಿಲೆಗಳಲ್ಲಿ ಕಾಣದ ಕೈಗಳ ಕಲೆ

ಡಾ॥ ಹೆಚ್. ಚಂದ್ರಶೇಖರ

○ ○ ○

ಥಾರಸ್ಟೈನ್ ನೆಬ್ಲನ್ ಮತ್ತು ವಿರಾಮ ವರ್ಗ

ಡಾ॥ ಎಂ. ಎಸ್. ವಿಘ್ನೇಶ

○ ○ ○

ಪರಿಸರದ ಅವನತಿ - ನಾವೆಷ್ಟು ಬೆಲೆ ತೆರಬೇಕಾದೀತು

ಡಾ॥ ಮಾಧವ ಗಾಡಗೀಳ

○ ○ ○

ಟಿಪ್ಪಣಿಗಳು

ಮಾರ್ಚ್-ಏಪ್ರಿಲ್ 1985

ಅಂಕಣ ಮಾರ್ಚ್ 1985 ಏಪ್ರಿಲ್ ಸಂಪುಟ : 6 ಸಂಚಿಕೆ : 4

'ಅಂಕಣ'ದಲ್ಲಿ ಪ್ರಕಟವಾಗುವ ಲೇಖನಗಳಿಗೆ ಉತ್ತಮ ಪ್ರತಿಕ್ರಿಯೆಗಳನ್ನು ಕಳುಹಿಸಿಕೊಡಿ. ಇದರಿಂದ ವಿಚಾರ ಮಂಥನಕ್ಕೆ ಅವಕಾಶವಾಗುವುದು. ಈ ಸಂಚಿಕೆಯಲ್ಲಿ ಪ್ರಕಟವಾಗಿರುವ ಡಾ|| ಹೆಚ್. ಚಂದ್ರಶೇಖರ್ ಮತ್ತು ಡಾ||ಮಾಧವ ಗಾಡಗೀಳ ಲೇಖನಗಳನ್ನು ಬೆಂಗಳೂರು 'ಆಕಾಶವಾಣಿ' ಕೃಪೆಯಿಂದ ಪಡೆದು ಕೊಳ್ಳಲಾಗಿದೆ. 'ಅಂಕಣ'ದ ಆರನೆಯ ಸಂಚಿಕೆಯನ್ನು 'ಶ್ರೀ ರಂಗ' ವಿಶೇಷಾಂಕ ವಾಗಿ ಪ್ರಕಟಿಸಲಾಗುವುದು.

'ಅಂಕಣ'

8 'ಚಿರಂಜೀವಿ' ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು-560 003

## ಈ ಸಂಚಿಕೆಯಲ್ಲಿ



ಪ್ರಕಟಣೆ : ಪಿ. ಪಿ. ಗೆಳೆಯರ ಬಳಗ

ವಾರ್ಷಿಕ ಚಂದಾ : ಹದಿನೈದು ರೂಪಾಯಿ

ಸ್ಥಾಯಿ ನಿಧಿ : ನೂರೈವತ್ತು ರೂಪಾಯಿ

# ಹೆಣ್ಣು ಶೋಷಣೆ, ಬಂಡಾಯ ಇತ್ಯಾದಿ – ಒಂದು ಪರಿಶೀಲನೆ

ಕೆ. ಸತ್ಯನಾರಾಯಣ

ವೀಣಾ ಶಾಂತೇಶ್ವರ ಅವರ ಕಿರುಕಾದಂಬರಿಯನ್ನು ವಿಶ್ಲೇಷಿಸಲು ಹೊರಟರೆ ಕೃತಿಗಿಂತ ಮುಖ್ಯವಾಗಿ ಅವರು ಎತ್ತಿಕೊಂಡಿರುವ ಸಮಸ್ಯೆಯೇ ನಮ್ಮ ಗಮನವನ್ನು ಹೆಚ್ಚು ಸೆಳೆಯುತ್ತದೆ. ಇದಕ್ಕೆ ಎರಡು ಕಾರಣಗಳನ್ನು ಯೋಚಿಸಬಹುದು. ಹೆಂಗಸಿನ ಸ್ವಾತಂತ್ರ್ಯ ಮತ್ತು ಬಂಡಾಯದ ಸಮಸ್ಯೆಯ ಪ್ರಸ್ತುತತೆ ಒಂದು ಕಾರಣವಾದರೆ, ಕನ್ನಡದಲ್ಲಿ ಈ ಸಮಸ್ಯೆಯನ್ನು ಪರಿಶೀಲಿಸುವ ಗಂಭೀರವಾದ ಕೃತಿಗಳು ಕಡಿಮೆ ಇರುವುದರಿಂದ ಸಮಸ್ಯೆಯ ಸರ್ವಸ್ವರೂಪವನ್ನು ಒಂದೇ ಕೃತಿಯ ಮೂಲಕ ತಿಳಿಯುವ ಪ್ರಯತ್ನ ಇನ್ನೊಂದು ಕಾರಣವಾಗುವುದು. ಆದರೆ ನನ್ನ ಕಾರಣ ಇದಲ್ಲ. ಈ ಕಿರು ಕಾದಂಬರಿ **ಸೂಚಿಸುವ ಧ್ವನಿಗಳು** ಮುಖ್ಯವೆನಿಸಿದರೂ, ಕಿರುಕಾದಂಬರಿಯಲ್ಲಿ ಸಮಸ್ಯೆ ವಿಸ್ತೃತವಾಗಿ ಪರಿಶೀಲನೆಗೊಳ್ಳದೆ ಇರುವುದರಿಂದ, ಇಡೀ ಕೃತಿ ಮತ್ತು ಅದರಲ್ಲಿ ಬರುವ ಪಾತ್ರಗಳು, ಘಟನೆಗಳು ಇನ್ನೂ ಸಿದ್ಧವಾಗುತ್ತಿರುವ ಕೃತಿಯೊಂದರ ಭಾಗವೆನ್ನಿಸುವುದರಿಂದ ವೀಣಾ ಅವರ ಕೃತಿಯನ್ನು ಸದ್ಯಕ್ಕಾದರೂ ಅವರು ಪರಿಶೀಲಿಸುವ ಸಮಸ್ಯೆಯು ಮತ್ತು ಕನ್ನಡದ ಆಲೋಚನಾ ಪರಂಪರೆ ಆ ಸಮಸ್ಯೆಗೆ ಸ್ಪಂದಿಸಿರುವ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದೆ ಹೆಚ್ಚು ಉಪಯುಕ್ತವೆನಿಸುತ್ತದೆ.

ಕಲಾಕೃತಿಗಳು ವಾಸ್ತವವನ್ನು ನಿರೂಪಿಸುತ್ತಲೇ ಬೇರೊಂದು ವಾಸ್ತವವನ್ನು ಸೃಷ್ಟಿಸುವ ಪ್ರಯತ್ನ ಮಾಡುತ್ತಾ, ತನ್ನ ಆಕೃತಿಯೊಳಗೇ ಸಾಮಾನ್ಯವಾಗಿ ನಮ್ಮ ಕಣ್ಣಿಗೆ ಗೋಚರಿಸದ ಅನುಭವದ ಒಳಪದರಗಳನ್ನು ಹೆಣೆದು ಕೊಂಡಿರುತ್ತವೆ. ಇದುವರೆಗಿನ ಕನ್ನಡ ಸಾಹಿತ್ಯ, ವೈಚಾರಿಕ ಸಾಹಿತ್ಯವು ಕೇರಿದಂತೆ ಹೆಂಗಸರ ಜೀವನದ ಅನುಭವದ ಒಳಪದರಗಳನ್ನು ವಿಶ್ಲೇಷಿಸುವಲ್ಲಿ ನಮಗೆ ಎಷ್ಟುನೆರವಾಗುತ್ತದೆ ಎಂಬ ಪ್ರಶ್ನೆಗೆ ಅಂತಹ ಆಶಾದಾಯಕ ಉತ್ತರವೇನೂ ಸಿಗಲಾರದು. ಗಂಡಸರೆ ಹೆಚ್ಚು ಲೇಖಕರಿರುವುದರಿಂದ ಹೀಗಾಗುತ್ತದೆ ಎಂಬುದು ಸಮಸ್ಯೆಯ ಒಂದು ಮುಖ ಮಾತ್ರ. ಹೆಂಗಸರ ದೈಹಿಕ ವೈಶಿಷ್ಟ್ಯತೆಯಿಂದ ಹೆಂಗಸರಿಗೆ ತಿಳಿಯಬಹುದಾದ ವಿವರಗಳ ಮಟ್ಟಿಗೆ ಮಾತ್ರ ಈ ಮಾತು ನಿಜ. ಆದರೆ ಒಂದು ಸಮಸ್ಯೆಯ ಬೇರೆ ಬೇರೆ ಆಯಾಮಗಳನ್ನು ಸಾಹಿತ್ಯ ಕೃತಿಗಳು ಗುರುತಿಸುವ, ಪರಿಶೀಲಿಸುವ ಪ್ರಯತ್ನದ ಹಿನ್ನೆಲೆಯಲ್ಲಿ ಯೋಚಿಸಿದಾಗ ಮಾತ್ರ ಕನ್ನಡದ ಆಲೋಚನಾ ಪರಂಪರೆಯ ಮಿತಿ ಅಥವಾ ಏಕಮುಖತೆ ಗೊತ್ತಾಗುತ್ತದೆ. ಈ ಅಂಶ ಇನ್ನು ಹೆಚ್ಚು ಸ್ಪಷ್ಟವಾಗಲು ನಮ್ಮ ಕೆಲವು ಮುಖ್ಯ ಲೇಖಕರ ಕೃತಿಗಳನ್ನು ಅವರ ನಿಲುವುಗಳನ್ನು ಪರಿಶೀಲಿಸಬಹುದು.

ನಮ್ಮ ಸಾಹಿತ್ಯಿಕ ಚಿಂತನೆಯಲ್ಲಿ ಹೆಂಗಸು ಹೆಚ್ಚು ಕಾಣಿಸಿಕೊಳ್ಳುವುದು, ಅವಳಿಗೆ ಸ್ಥಾನವಿರುವುದು ತಾಯಿಯಾಗಿ ಮಾತ್ರ. ಕೃಷಿಪ್ರಧಾನವಾದ ಸಮಾಜದಲ್ಲಿ ಭೂಮಿಗಿರುವ ಪ್ರಾಮುಖ್ಯ ಕೂಡ ಇದಕ್ಕೊಂದು ಕಾರಣವಿರಬಹುದು. ಹೆಂಗಸಿಗೆ ಕಟ್ಟುವುದರಲ್ಲಿ ಹಾಗೂ ನಿರ್ವಹಿಸುವುದರಲ್ಲಿ ಇರುವ ವಿಶೇಷ ಒಲವು ಮತ್ತು ಪರಿಣಿತಿ ಇವುಗಳ ಹಿನ್ನೆಲೆಯಲ್ಲಿ ಆಕೆಯ ಸಾಂಸಾರಿಕ ಜೀವನ ಕುಟುಂಬವನ್ನು ಕಟ್ಟುವ ಮತ್ತು ಪಾಲಿಸುವ ಪ್ರಕ್ರಿಯೆಗೆ ಸಂಬಂಧಪಟ್ಟಹಾಗೆ ಮಾತ್ರ ಹೆಂಗಸರ ಪಾತ್ರ ಪೋಷಣೆಗಳಲ್ಲಿ ಹೆಚ್ಚು ಮಹತ್ವ ಕಂಡು ಬರುತ್ತದೆ. ಆದರೆ ಹೆಂಗಸಿಗೇ ಇರುವ ವಿಶಿಷ್ಟವಾದ ಸಮಸ್ಯೆಗಳಲ್ಲಿ ಅವಳ ದೇಹ ಮತ್ತು ಮನೋಧರ್ಮಕ್ಕೆ ಅವಳ ಬಾಲ್ಯ ಮತ್ತು ಯೌವನಕ್ಕೆ ಸಂಬಂಧಿಸಿದ ಹುಡುಕಾಟಗಳು ನಮ್ಮ ಲೇಖಕರ ಗಮನವನ್ನು ಹೆಚ್ಚು ಸೆಳೆದಿಲ್ಲ. ಹೆಂಗಸಿನ ವ್ಯಕ್ತಿ ವೈಶಿಷ್ಟ್ಯಕ್ಕಿಂತ (Specificity) ಆಕೆಯ Social !dentity ಯೇ ಮುಖ್ಯವಾಗಿರುವುದರಿಂದ ಆಕೆಯ ಪಾತ್ರ ಪೋಷಣೆಯಲ್ಲಿ 'ಪಾಲನೆಯ' ಅಂಶಕ್ಕೇ ಹೆಚ್ಚು ಮಹತ್ವ ಕೊಡಬೇಕಾಗುವುದು. ಬಹುಪಾಲು ಹೆಂಗಸರು ಇದನ್ನೇ ಒಪ್ಪಿಕೊಳ್ಳುವುದರಿಂದ ಹೆಂಗಸರೇ ಅವರನ್ನು ಕುರಿತು ಬರೆದಾಗಲೂ, ಚಿಂತಿಸಿದಾಗಲೂ ನಮಗೆ ಹೆಚ್ಚು ವ್ಯತ್ಯಾಸಗಳು ಕಾಣಸಿಗುವುದಿಲ್ಲ, ಉದಾಹರಣೆಗೆ ಜನಪ್ರಿಯ ಲೇಖಕಿಯರ ಕೃತಿಗಳನ್ನು ತೆಗೆದುಕೊಳ್ಳೋಣ. 'ಪಾಲನೆ'ಯ ಅಂಶವನ್ನು ಇನ್ನಷ್ಟು ಆಕರ್ಷಕವಾಗಿ ಕಾಣಿಸುವ ಪ್ರಯತ್ನ ಇವರ ಕೃತಿಗಳಲ್ಲಿ ಸ್ಪಷ್ಟವಾಗಿ ಕಾಣುತ್ತವೆ. ಶ್ರೀಮಂತ ಮತ್ತು ಯಶಸ್ವಿಯಾದ ಸಂಸಾರಗಳನ್ನು ಚಿತ್ರಿಸುವಲ್ಲಿ ಇವರಿಗಿರುವ ಒಲವಿನಲ್ಲೆ ಇದು ಹೆಚ್ಚು ಸ್ಪಷ್ಟವಾಗಿ ಕಾಣುತ್ತದೆ. ಆಧುನಿಕ ಹೆಂಗಸನ್ನು ಕುರಿತು ಬರೆಯಲು ಹೊರಟ ತ್ರಿವೇಣಿಯವರ ಕೃತಿಗಳಲ್ಲೂ ಇಂತಹ ಪ್ರಯತ್ನವನ್ನು ನಾವು ಕಾಣಬಹುದು. (ಉದಾ '**ಶರಪಂಜರ**' ಕಾದಂಬರಿಯ ಸಾಂಸಾರಿಕ ಹಿನ್ನೆಲೆ) ಆದರೆ ಇಂದು ನಮ್ಮ ಸಾಮಾಜಿಕ ವಾತಾವರಣದಲ್ಲಿ ಆಗುತ್ತಿರುವ ಕೆಲವು ಬದಲಾವಣೆಗಳು ಹೆಂಗಸಿಗೆ ಸಾಂಪ್ರದಾಯಿಕವಾಗಿ ಸಿಕ್ಕಿದ್ದ Social Identityಯನ್ನು ಬಹು ವೇಗವಾಗಿ ಮತ್ತು ಬಲವಂತವಾಗಿ ಕಿತ್ತುಕೊಳ್ಳುತ್ತದೆ. ಎಲ್ಲ ಬದಲಾವಣೆಗಳಲ್ಲೂ ವೇಗದ ಮತ್ತು **ಬಲವಂತದ** ಅಂಶ ಇರುವುದಾದರೂ ಭಾರತೀಯ ಹೆಂಗಸಿನ ಸದ್ಯದ ಸಿದ್ಧತೆಯ ಹಿನ್ನೆಲೆಯಲ್ಲಿ ಗಮನಿಸಿದರೆ ಚರಿತ್ರೆಯ ಈ ಕಿತ್ತುಕೊಳ್ಳುವಿಕೆಯ ಪ್ರಕ್ರಿಯೆಯಲ್ಲಿ ಇರುವ ಹಿಂಸೆಯನ್ನು ನಾವು ಗುರುತಿಸಬಹುದಾಗಿದೆ. (ಒಂದು ಮಟ್ಟದಲ್ಲಿ ವೀಣಾರವರ ಕೃತಿಯ ನಾಯಕಿ ಕಮಲ ಈ ಎಲ್ಲ ಹಿಂಸೆಗಳ ಮೊತ್ತವೂ ಹೌದು) ತಡವಾಗಿ ಆಗುವ ಮದುವೆಗಳು, ಮದುವೆ ಮತ್ತು ಪ್ರೇಮಕ್ಕೆ ಸಂಬಂಧಪಟ್ಟ ಹಾಗೆ ಇರುವ ಸೀಮಿತವಾದ ಆಯ್ಕೆಯ ಅವಕಾಶ, ಆರ್ಥಿಕ ಅಭದ್ರತೆ, ಜಾತಿಶ್ರೇಣಿ ಸಡಿಲವಾಗುವುದು ಜೊತೆ ಜೊತೆಯಲ್ಲೇ ಪಾಲನಾ ಕ್ಷೇತ್ರಕ್ಕೆ ಸಂಬಂಧಪಟ್ಟ ಕೆಲವು ಕೆಲಸಗಳು ಕಡಿಮೆಯಾಗುತ್ತಿರುವುದು. (ಕಿಂಡರ್ ಗಾರ್ಟನ್, ರೆಸಿಡೆಂಷಿಯಲ್ ಸ್ಕೂಲ್, ಸರ್ಕಾರದ ಸಾಮಾಜಿಕ ಸುಧಾರಣಾ ಕಾರ್ಯಕ್ರಮಗಳು, ವೈಜ್ಞಾನಿಕವಾಗಿ ಮಗುವನ್ನು

ಬೆಳೆಸುವ ಕ್ರಮದಲ್ಲಿ ಕಂಡುಬರುತ್ತಿರುವ ಸುಧಾರಣೆಗಳು.) ಇವುಗಳ ಹಿನ್ನೆಲೆಯಲ್ಲಿ ಆಧುನಿಕ ವಿದ್ಯಾಭ್ಯಾಸ ಪ್ರತಿಯೊಬ್ಬರಲ್ಲೂ ಜಾಗ್ರತಗೊಳಿಸುವ ವ್ಯಕ್ತಿಯ ಸ್ವಾಯತ್ತತೆ ಮತ್ತು ವೈಶಿಷ್ಟ್ಯದ ಅರಿವು.— ಇವುಗಳೆಲ್ಲದರಿಂದಾಗಿ ಹೆಂಗಸು ಇಚ್ಛೆ ಇದ್ದೋ ಇಲ್ಲದೆಯೋ ತನ್ನ ಅಸ್ತಿತ್ವಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಎದುರಿಸಲೇ ಬೇಕಾಗಿದೆ. ಗಂಡಸಿಗಾದರೋ ಈ ಪ್ರಶ್ನೆಗಳನ್ನು ಎದುರಿಸುವಲ್ಲಿ ಇತಿಹಾಸದುದ್ದಕ್ಕೂ ಶ್ರೇಷ್ಠವಾದ ಪ್ರತಿಭೆ ಈಗಾಗಲೇ ಮಾಡಿರುವ ನಿರ್ದಿಷ್ಟ ಮಾದರಿಗಳಿವೆ. ಆತನನ್ನು ಕುರಿತು ಶತಶತಮಾನಗಳ ಚಿಂತನೆ ನಡೆದಿದೆ. ಹೆಂಗಸಾದರೋ ತನ್ನ ಪಯಣವನ್ನು ಈಗ ಪ್ರಾರಂಭಿಸಬೇಕಾಗಿದೆ. (ವೀಣಾ ಅವರ ಕೃತಿ ಇಂತಹ ಸಿದ್ಧತೆಗಳನ್ನು ಪ್ರಾಮಾಣಿಕವಾಗಿ ಮತ್ತು ಸ್ಪಷ್ಟವಾಗಿ ಸೂಚಿಸುತ್ತವೆ. ಇದರ ವಿವರಣೆ ಮುಂದಿನ ಭಾಗದಲ್ಲಿದೆ.)

ಮೇಲಿನ ವಿವರಣೆಗೆ **ಅನುಗುಣವಾಗಿಯೋ** ಮಾಸ್ತಿಯವರಿಂದ ಹಿಡಿದು ದೇವನೂರು ಮಹಾದೇವರ ತನಕ ಹೆಂಗಸಿನ 'ಪಾಲನೆ'ಯ ಕರ್ತವ್ಯಕ್ಕೆ ಸಂಬಂಧಪಟ್ಟ ಅಂಶಗಳಿಗೆ ನಮ್ಮ ಲೇಖಕರು ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಮಾಸ್ತಿ ಮತ್ತು ಕಾರಂತರಲ್ಲಂತೂ ಈ ಪಾಲನೆಯ ಅಂಶಗಳು ಆಧ್ಯಾತ್ಮಿಕ ಛಾಯೆಯನ್ನು ಕೂಡ ಪಡೆಯುತ್ತದೆ. ಈ ಲೇಖಕರು ಚಿತ್ರಿಸುವ ವಿಧವೆಯರ ಪಾತ್ರಗಳನ್ನು ಉದಾಹರಣೆಗಾಗಿ ಗಮನಿಸಬಹುದು—ಮಹಾದೇವರ ಸಾಕವ್ವ ಈ ಆಧ್ಯಾತ್ಮಿಕ ಛಾಯೆಯ ಜೊತೆಗೆ ರೊಮ್ಯಾಂಟಿಕ್ ಕವಚವನ್ನು ಕೂಡ ಪಡೆಯುತ್ತಾಳೆ. ಇನ್ನು ಕೆಲವು ಲೇಖಕ ಪಾತ್ರಗಳಂತು ಕಾಮ ಸಂಬಂಧಗಳಲ್ಲೂ ತಾಯಿಯ ಅಂಶವನ್ನೆ ಹುಡುಕುತ್ತಿರುತ್ತಾರೆ, ಅಥವಾ ಗುರುತಿಸುತ್ತಿರುತ್ತಾರೆ. ಕುವೆಂಪುರವರ ಸೀತೆ (**ಕಾನೂರ ಹೆಗ್ಗಡತಿ**) ದೇಸಾಯಿಯವರ ಡಾಲಿ (**ಮುಕ್ತಿ**) ಅನಂತಮೂರ್ತಿಯವರ ಚಂದ್ರಿ, ಗೌರಿ (**ಸಂಸ್ಕಾರ, ಅವಸ್ಥೆ**) ಇವುಗಳನ್ನು ಉದಾಹರಣೆಯಾಗಿ ಕೊಡಬಹುದು. ಆದರೆ ಇದಕ್ಕೆ ಭಿನ್ನವಾದ ಮನೋಧರ್ಮವು ಕೂಡ ಸಾಕಷ್ಟು ಪ್ರಮಾಣದಲ್ಲಿ ಕಂಡುಬಂದಿದೆ ಎಂಬುದು ಅಷ್ಟೇ ಮುಖ್ಯವಾದ ಸಂಗತಿ. ತ್ರಿವೇಣಿಯವರ ಕೆಲವು ಕಾದಂಬರಿಗಳಲ್ಲಾದರೂ ಆಧುನಿಕ ಮಹಿಳೆಯ ಅಸ್ತಿತ್ವಕ್ಕೆ ಸಂಬಂಧಪಟ್ಟ ಕೆಲವು ಸಮಸ್ಯೆಗಳನ್ನು ಪರಿಶೀಲನೆಗೆ ಎತ್ತಿಕೊಳ್ಳಲಾಗಿದೆ (**ಕಂಕಣ, ಮುಕ್ತಿ ಅಪಸ್ವರ, ಅಪಜಯ** ಇತ್ಯಾದಿ) ಪ್ಲೇಟೋನಿಕ್ ಪ್ರೇಮನ್ನು ಪರಿಶೀಲಿಸುವ ಭೈರಪ್ಪನವರ '**ದೂರ ಸರಿದರು**', ಹೆಂಗಸಿನ ದೈಹಿಕ ಹಿಂಸೆಯನ್ನು ತನ್ನ ನಿರೂಪಣಾ ಧ್ವನಿಯ ಒಂದು ಪ್ರಮುಖ ಅಂಗವಾಗಿ ಮಾಡಿಕೊಂಡಿರುವ 'ಪರ್ವ' ಕಾದಂಬರಿ ಚಿತ್ತಾಲರ 'ಮೂರು ದಾರಿಗಳ'ಲ್ಲಿಯ ನಿರ್ಮಲೆಯ ಆತಂಕಗಳು, ಇಂತಹ ಕೆಲವೇ ಆದರೆ ಮುಖ್ಯವಾದ ಅಪವಾದಗಳು.

o o o

ವೀಣಾ ಅವರ ಈ ಕೃತಿಯಲ್ಲಿ ಹೆಂಗಸಿನ ಸ್ವಾತಂತ್ರ್ಯಕ್ಕೆ ಸಂಬಂಧಪಟ್ಟ ಪ್ರಶ್ನೆ

ಗಳನ್ನು ಸ್ಥೂಲವಾಗಿ ಎತ್ತಿಕೊಳ್ಳಲಾಗಿದೆಯಾದರೂ– ಯೌವನ ಮತ್ತು ಕುಟುಂಬ ರಚನೆ ಇವುಗಳ ಹಿನ್ನೆಲೆಯಲ್ಲಿ ಸ್ವಾತಂತ್ರ್ಯದ ಪ್ರಶ್ನೆಯನ್ನು ವಿಶಿಷ್ಟವಾಗಿ ಎದುರಿಸುವ ಪ್ರಯತ್ನ ಮಾಡಲಾಗಿದೆ. ಇದು ಒಂದು ನೀಳ್ಗತೆ ಅಥವಾ ಕಿರುಕಾದಂಬರಿಯ ವ್ಯಾಪ್ತಿಗೆ ಮೀರಿದ್ದು ಎನ್ನುವುದು ಈ ಕೃತಿಯ ನಿರೂಪಣೆಯಲ್ಲಿಯ ವೇಗ ಮತ್ತು ಅದನ್ನು ಸಾಧ್ಯವಾಗಿಸಲೆಂದೇ ಅನುಸರಿಸಲಾಗಿರುವ ದಿನಚರಿಯ ಮತ್ತು ಪ್ರಥಮ ಪುರುಷ ನಿರೂಪಣೆಯ ತಂತ್ರದಲ್ಲಿ ವ್ಯಕ್ತವಾಗುತ್ತದೆ. ಒಂದು ಸಮಸ್ಯೆಯನ್ನು ಕಲಾ ಕೃತಿಯಲ್ಲಿ ಪರಿಶೀಲಿಸುವಾಗ ಸಾಮಾನ್ಯವಾಗಿ ಅನುಸರಿಸುವ ಕ್ರಮ ಇದು: ಹಲವು ಜೀವನ ಮಾದರಿಗಳ ಹಿನ್ನೆಲೆಯಲ್ಲಿ ತಾತ್ವಿಕತೆಯನ್ನು, ಸಮಸ್ಯೆಯನ್ನು ನೋಡು ವುದು. ಆದರೆ ಇದಕ್ಕೆ ಬದಲಾಗಿ ಈ ಕಿರುಕಾದಂಬರಿಯ ಘಟನಾವಳಿಗಳು, ಪಾತ್ರ ಗಳ ಮನೋಧರ್ಮ, ಕಥಾನಾಯಕಿ ಕಮಲಳ ದಿನಚರಿಯಿಂದ ನಿರ್ಧಾರವಾದಂತೆ ಪೋಷಕವಾದಂತೆನಿಸುತ್ತದೆ. ದಿನಚರಿ ಓದುತ್ತಾ ಹೋದುತ್ತಲೇ ಹೊಸ ಪಾತ್ರಗಳು ಪರಿಚಯವಾಗುವುದು. ಘಟನೆಗಳು ನಡೆಯುವುದು. ಇದರಿಂದಾಗಿ ಎಲ್ಲವನ್ನೂ ಕಮಲಳ ಜೀವನದ ಹಿನ್ನೆಲೆಯಲ್ಲಿ ನೋಡಬೇಕೆನ್ನುವ ಸೂಚನೆ ಸಿಕ್ಕಿ ಕಥಾನಕಕ್ಕೆ ಏಕಮುಖವಾದ ಆಯಾಮ ದೊರಕುತ್ತವೆ. ಈ ಮಿತಿಯನ್ನು ಗಮನ ದಲ್ಲಿಟ್ಟುಕೊಂಡೇ ಕೆಳಗಿನ ಮಾತುಗಳನ್ನು ಹೇಳಲಾಗಿದೆ;

ಬದಲಾಗುತ್ತಿರುವ ಸಮಾಜದಲ್ಲಿ ಹೆಣ್ಣಿಗೆ ಕುಟುಂಬಾಭಿಮುಖವಾದ ಆಯ್ಕೆ ಮತ್ತು ಚಲನೆ ಆಕೆ ಇಷ್ಟಪಟ್ಟಾಗಲು ಕಷ್ಟ ಸಾಧ್ಯವಾದದ್ದು. ತನ್ನ ಜಾತಿ, ಬಂಧು ಗಳು, ಮತ್ತು ವ್ಯಕ್ತಿ ವೈಶಿಷ್ಟ್ಯವಾದ ಕಲೆಯ ವ್ಯಾಮೋಹವನ್ನು ಕೂಡ ಬಿಟ್ಟು ಕೊಡುವ ಕಮಲಳಿಗೆ ಕೂಡ ಇದು ಸಾಧ್ಯವಾಗುವುದಿಲ್ಲ. ಕಮಲಳ ಮುಖ್ಯವಾದ ತುಡಿತ ಅಥವಾ ನೀಳ್ಗತೆಯ ತುಡಿತವಿರುವುದು ಈ ಅಂಶದಲ್ಲಿ; ಗಂಡಸಿಗೆ ಸಂಪೂರ್ಣ ಸಮರ್ಪಣೆಯಿಂದಲೂ ಆಕೆ ಕುಟುಂಬಾಭಿಮುಖವಾಗಿ ಚಲಿಸಲಾರಳು. ಹಾಗೆಯೇ ಇಂತಹ ಸಂಪೂರ್ಣ ಸಮರ್ಪಣೆಯನ್ನು ಕೂಡ ಆಧುನಿಕ ಮನೋಭಾವ ಕಷ್ಟಸಾಧ್ಯ ವಾಗಿಸುತ್ತದೆ ಮತ್ತು ಪ್ರಶ್ನಿಸುತ್ತಾ ಹೋಗುತ್ತದೆ. ಈ ವಿರುದ್ಧ ದಿಕ್ಕುಗಳ ತುಡಿತವನ್ನು ತನ್ನ ಅಂತಃಸತ್ವದ ಹಿನ್ನೆಲೆಯಲ್ಲಿ ಪರಿಶೀಲಿಸಿಕೊಳ್ಳುವ ವ್ಯವಧಾನ ವಾಗಲೀ ಅಥವಾ ಅವಳು ಆಯ್ದುಕೊಂಡ ಗಂಡಸಿನ ನೆರವು ಇದಕ್ಕೆ ದೊರಕುವ ಅದೃಷ್ಟವಾಗಲಿ ಎರಡೂ ಕಮಲಳಿಗಿಲ್ಲ. ದಿನಚರಿಯನ್ನು ಓದುತ್ತಾ ತನ್ನ ಕಥೆಯನ್ನು ಹೇಳುವ ಶಶಿ ಬಯಸುವ ಸ್ವಾತಂತ್ರ್ಯವು ಕೂಡ ನಿಜವಾಗುವಂತದ್ದಲ್ಲ. ಅವಳಿ ಆಯ್ದ ಜೀವನ ಕ್ರಮದಿಂದ ಬರುವ ಸ್ವಾತಂತ್ರ್ಯ ಆಳವಾದ ಭಾವನೆಗಳ ಚಿವುಟಿ ಹಾಕಿ ಜೀವನವನ್ನು ಒಂದು ರೀತಿಯಲ್ಲಿ matter of fact ರೀತಿಯಲ್ಲಿ ನೋಡುವ ಸ್ಥಿತಿಗೆ ಅವಳನ್ನು ತಂದಿದೆ. ಈ ಮಾತುಗಳನ್ನು ಗಮನಿಸಿ.

'ಸತೀಶನ ಫ್ಲಾಟ್ ಸಾಕಷ್ಟು ಬೆಚ್ಚಗಿತ್ತು. ಆಯಿಸ್ ಕ್ರೀಮ್ ಸಾಕಷ್ಟು ತಂಪಾಗಿತ್ತು. ಬೆಡ್‌ರೂಮಿನ ಹವೆ ತುಂಬ ಬೆಚ್ಚಗಿತ್ತು. ಸತೀಶನ ಅಪ್ಪುಗೆ ಎಷ್ಟು

ಬೆಚ್ಚಗಿತ್ತು: ಶಶಿಯ ಮನಸ್ಸು ಎಷ್ಟೊ ತಂಪಾಯಿತು (ಪುಟ: 29) ಇವೆರಡು ಪಾತ್ರಗಳಿಗೆ ಪ್ರತಿರೂಪವೆಂಬಂತೆ ಬರುವ ಅಪ್ಟೆ ದಂಪತಿಗಳಲ್ಲಿ ಸ್ವಾತಂತ್ರ್ಯ ಮತ್ತು ಬಂಡಾಯ ಎರಡು ನಿಜವಾಗಿವೆ. ಯಾರ ಅಥವಾ ಯಾವುದೇ ವಿಧವಾದ ಬಂಡಾಯ ವಿಲ್ಲದೆ ಪರಸ್ಪರ ತಿಳುವಳಿಕೆ, ಅನುಭೂತಿ, ಹೆಂಗಸಿನ ಸಾಮಾಜಿಕ ಪಾತ್ರದ ವಿಸ್ತರಣೆ ಒಂದು ರೀತಿಯ ಆದರ್ಶದವಾಂಛೆ– ಇವೆಲ್ಲ ಅಪ್ಟೇ ದಂಪತಿಗಳಿಗೆ ಸ್ವಾತಂತ್ರ್ಯವನ್ನು ನಿಜವಾಗಿಸಿದೆ ಮತ್ತು ಮಾನವೀಯವಾಗಿಸಿದೆ. ಈ ಸ್ವಾತಂತ್ರ್ಯ ಮತ್ತು ಬಂಡಾಯದ ಅರ್ಥಪೂರ್ಣತೆ ಎಷ್ಟು ಗಾಢವಾದುದೆಂದರೆ ಆಗತಾನೆ ಜೀವನಕ್ಕೆ ಕಾಲಿಡುತ್ತಿರುವ ಲೀಲಾ ಎಡವುದನ್ನು, ವ್ಯಕ್ತಿ ಚಾರಿತ್ರ್ಯ ನಿರ್ಮಾಣವಾಗುವಾಗಿನ, ನೈತಿಕ ಬಿಕ್ಕಟ್ಟೆಂಬ ರೀತಿಯಲ್ಲಿ ಅದನ್ನು ತಿಳಿದು ಪರಿಹಾರವನ್ನು ಆಕೆ ಕಂಡುಕೊಳ್ಳಲು ನೆರವಾಗುವ ಅಪ್ಟೆ ದಂಪತಿಗಳಿಗೆ ಬದಲಾಗಿ ಶಶಿ ಅದಕ್ಕೆ ಒಂದು ರೀತಿಯ ವಿಚಿತ್ರ ಯಾಂತ್ರಿಕತೆಯಿಂದ ಸ್ಪಂದಿಸುತ್ತಾಳೆ. ಅವಳ ಸ್ಪಂದನಗಳು ಲೀಲಾಳನ್ನು ಭವಿಷ್ಯದ ಕಡೆಗೆ ಆರೋಗ್ಯ ಕರವಾಗಿ ಮುಖ ತಿರುಗಿಸಲಾರವು. ಆಕೆಯ ಸ್ಪಂದನಗಳಿಗೆ ಅಷ್ಟು ಸತ್ಯವಿಲ್ಲ.

ನಾಯಕಿ ಕಮಲ ಮತ್ತು ಆಕೆಯ ಡೈರಿ ಓದುವ ಶಶಿ, ಹೊಸ ಪೀಳಿಗೆಯ ಲೀಲಾ– ಇವರೆಲ್ಲ ಒಂದು ರೀತಿಯಲ್ಲಿ ಒಬ್ಬರೇ ಆಗಿದ್ದಾರೆ. ಕಥಾನಕ ಮುಗಿಯುವ ಹೊತ್ತಿಗೆ ಕಮಲಳ ಆಯ್ಕೆಯಲ್ಲಿ ಮತ್ತು ಜೀವನದಲ್ಲಿ ಕಂಡು ಬರುವ ಅಸಹಾಯ ಕತೆಯನ್ನು ಶಶಿ ಮತ್ತು ಲೀಲಾ ಇಬ್ಬರು ತಲುಪುತ್ತಿದ್ದಾರೆ. ಕಥಾನಕದ ಅಂತ್ಯದಲ್ಲಿ ಹೀಗಾಗುವ ಪ್ರಶ್ನೆ ಹಾಗಿರಲಿ, ಅವರು ಹೊಸ ಆಯ್ಕೆಯನ್ನು ಮಾಡಿಕೊಳ್ಳು ತ್ತಿದ್ದೇವೆಂದಾಗಲು ಅವರು ನಿಜವಾಗಲು ಆಯ್ಕೆ ಮಾಡಿಕೊಳ್ಳುವುದು ಆಧುನಿಕ ಹೆಂಗಸಿನ Identity ಬಗ್ಗೆ ಗಂಡಸು ಈಗಾಗಲೇ ಸಿದ್ಧಗೊಳಿಸಿರುವ ಮಾದರಿಯನ್ನು. ದುಡಿಯುವ ವರ್ಗದ ಪ್ರತಿನಿಧಿಯಾಗಿ ಬರುವ ರೋಶನ್ ಬಿ– ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವಾಗಿನ ಧಾರ್ಷ್ಟ್ಯವನ್ನು ಮೆಚ್ಚಬಹುದಾದರು ಅವಳು ಒಪ್ಪಿ ಕೊಳ್ಳುವ ಪಾತ್ರ ಸಾಂಪ್ರದಾಯಿಕವಾದ್ದು. ಅದರಲ್ಲಿ ಆಕೆಯ ವ್ಯಕ್ತಿ ವೈಶಿಷ್ಟ್ಯಕ್ಕೆ ಸ್ಥಾನವಿಲ್ಲ. (ಕಾರಂತರು ಅಥವಾ ಮಾಸ್ತಿಯ ಹೆಂಗಸರ ಪಾತ್ರಗಳಂತೆ) ಅಥವಾ ಗಂಡನ ಕಾಯಿಲೆಯಿಂದ ಸಿಗುವ ಸ್ವಾತಂತ್ರ್ಯವನ್ನು ಉಪಯೋಗಿಸಿಕೊಳ್ಳುವ ಆಸೆಯ ಗುಜರಾತಿ ಹೆಂಗಸು ಕೂಡ ಆರೋಗ್ಯಕರವಾದ ಹಾದಿಯಲ್ಲಿಲ್ಲ. ಹೀಗೆ ಒಂದಲ್ಲ ಒಂದು ಮಿತಿಯನ್ನು ಅಸಹಾಯಕತೆಯನ್ನು ಸೂಚಿಸುವ ಎಲ್ಲರ ಆಯ್ಕೆಗೆ ಪರ್ಯಾಯವಾಗಿ ಅಪ್ಟೆ ಕುಟುಂಬವನ್ನು ಗಮನಿಸಬಹುದಾಗಿದೆ. ಇವೆಲ್ಲವುಗಳ ಪ್ರಾಮಾಣಿಕ ನಿರೂಪಣೆ ಕಿರು ಕಾದಂಬರಿಯ ಒಂದು ಹೆಚ್ಚಳವಾದರೆ ಶಶಿ ಮಾಡುವ ಆಯ್ಕೆಯಲ್ಲಿನ Ambivalance – ದ್ವಂದ್ವವನ್ನು ಅಸ್ಪಷ್ಟತೆಯನ್ನು ಹಾಗೆಯೇ ಉಳಿಸುವುದು ಕೂಡ ವೀಣಾ ಅವರ ಮತ್ತೊಂದು ಹೆಚ್ಚಳವಾಗಿದೆ. ಈ ದ್ವಂದ್ವ ಅಸಹಾಯಕತೆ, ಅಸ್ಪಷ್ಟತೆ ಮಾತ್ರವೇ ಶಶಿಗೆ ಸಾಧ್ಯವಾಗುವಂತಹುದು. ಅವಳ ಅಂತಃ ಸತ್ವಕ್ಕೆ ಎಟುಕುವಂತದ್ದು. ಈ ಸಾಲುಗಳನ್ನು ಗಮನಿಸಿ.

'ಯೋಚಿಸುತ್ತಿದ್ದಂತೆ ಶಶಿಗೆ ಬಹಳ ಬೇಸರವಾಗುತ್ತದೆ. ಅವಳ ತಲೆ ಧಿಮ್ಮೆನ್ನುತ್ತದೆ. ಯಾವ ಯಾವುದೋ ನೆನಪುಗಳು– ಯಾರ ಯಾರವೋ ಮುಖಗಳು– ಎಲ್ಲೆಲ್ಲಿಯವೋ ದೃಶ್ಯಗಳು– ಏನೇನೋ ವಿಚಿತ್ರ ಅನಿಸಿಕೆಗಳು. ಎಲ್ಲಾ ನನ್ನ ದೈವವೆಂದು ಕ್ಷೀಣವಾಗಿ ಹೇಳಿ ಅರೆಗಣ್ಣು ಮುಚ್ಚಿ ಮಲಗಿದ್ದ ಪೂರ್ಣಮಾಸಿಂಗ್, ಗಂಡನ ಪೋಸ್ಟ್ ಕಾರ್ಡ್ ಬಂತೆಂದು ಎಲ್ಲ ಮರೆತು ತಿರುಗಿ ಬಂದ ರೋಶನ್‌ಬಿ, ಪ್ರಮೋಷನ್ ಪಡೆದು ಲಗ್ನವಾಗಲಿರುವ ಖುಷಿಯಲ್ಲಿ ಬರಲಿರುವ ವಿಪತ್ತಿನ ಅರಿವಿಲ್ಲದ ಲೀಲಾ ಕುಲಕರ್ಣಿ, ಜೊತೆಗೆ ಶೋಷಣೆಯ ವಿರುದ್ಧ ಬಂಡಾಯ ಮಾಡಬೇಕೆಂದು ಲೆಕ್ಚರ್ ಕೊಡುತ್ತ ತಿರುಗುವ ಮಾಲಿನಿ ಬಾಯಿ ಪಟೇಲ್ ಹಾಗು ಹಾಸಿಗೆ ಹಿಡಿದ ಆಕೆಯ ಗಂಡ, ನಗು ನಗುತ್ತಲಿದ್ದ ಆಪ್ಟೆ ದಂಪತಿಗಳು....ಹಾಗೂ ಇವರೆಲ್ಲರ ಆಚೆ ಧೈರ್ಯವಾಗಿ ಎಲ್ಲ ಧಿಕ್ಕರಿಸಿ ದೂರ ಹೋಗಿ, ಕೆಲವಾರು ತಿಂಗಳಲ್ಲೇ ತಿರುಗಿ ತಾನು ಧಿಕ್ಕರಿಸಿ ಹೋಗಿದ್ದ– ಬದುಕನ್ನೇ ಅಪ್ಪಿಕೊಳ್ಳಲು ಸ್ವಇಚ್ಛೆಯಿಂದ ವಾಪಸು ಬಂದಿದ್ದ ಕಮಲಾ....(ಪುಟ 109-110) ಮೊದಲೇ ಹೇಳಿದಂತೆ ಈ ಮಾತುಗಳು ಹೆಂಗಸಿನ ಬಂಡಾಯ ಮತ್ತು ಸ್ವಾತಂತ್ರದ ಸಮಸ್ಯೆಯನ್ನು ಕುರಿತು ಸದ್ಯದ ಸ್ಥಿತಿಯ ಪ್ರಾಮಾಣಿಕ ವ್ಯಾಖ್ಯಾನವಾಗುವುದರ ಜೊತೆಗೆ ಆಕೆಯ ಸಿದ್ಧತೆಯನ್ನು ಕೂಡ ಸೂಚಿಸುತ್ತದೆ. ಇದಕ್ಕೆ ಪೂರಕವೆಂಬಂತೆ ಬರುವ ಶಶಿಯ ಸತೀಶನ ಆಯ್ಕೆ, ಆ ಆಯ್ಕೆ ಮಾಡುವಾಗಿನ ಮನಸ್ಥಿತಿಯನ್ನು ಸೂಚಿಸುವ ಈ ಸಾಲುಗಳನ್ನು ಗಮನಿಸಿ.

ಸುತ್ತಲಿನ ಹಾಡೇ ಹಗಲಿನ ಆ ಉರಿ ಬಿಸಿಲಿನಲ್ಲೂ ಕತ್ತಲು ಕವಿದಂತೆ ಎನಿಸಿತು. ತುಸುವೇ ಬೆಳಕು. ಆ ಕಡುಗತ್ತಲಲ್ಲಿ ನಸುಬೆಳಕಿನಲ್ಲಿ ಆಕೆಗೆ ಮೈಮನಗಳೆರಡೂ ಮರೆತಾಗಿ ತಲೆಸುತ್ತಿ ಬರುತ್ತಿರುವಂತೆನಿಸಿ ಬೀಳುವ ಮೊದಲೇ ಏನನ್ನಾದರೂ ಆಧರಿಸಿ ಹಿಡಿಯಬೇಕೆಂದು– ಆಕೆ ಧಾವಿಸಿ ಮುಂದೆ ಬಂದಳು– (ಪುಟ : 110)

ಆಪ್ಟೆ ದಂಪತಿಗಳ ಪಾತ್ರದಲ್ಲಿ– ಪರ್ಯಾಯ ಆಯ್ಕೆಯ ಸೂಚನೆಯಿರುವುದರಿಂದ ಅವರ ಬಗ್ಗೆ ಕೆಲವು ಮಾತುಗಳನ್ನು ಹೇಳುವುದು ಅವಶ್ಯವೆನಿಸುತ್ತದೆ. ಈ ವಕೀಲ ದಂಪತಿಗಳಲ್ಲಿ ಯಾವುದೇ ರೀತಿಯ ದೈಹಿಕ, ಮಾನಸಿಕ ದೌರ್ಬಲ್ಯಗಳಿಲ್ಲ. ಏಕೆಂದರೆ ಹೆಂಗಸು ಬಯಸುವ ಸ್ವಾತಂತ್ರ್ಯ ಅವಕಾಶಗಳು ಗಂಡಸಿನ ದೌರ್ಬಲ್ಯದಿಂದ, ಅಸಹಾಯಕತೆಯಿಂದ ಬರುವುದಾದರೆ ಅದು ಅರ್ಥಹೀನ ಮತ್ತು ಮುಖ್ಯವಾಗಿ ಪ್ರಾಸಂಗಿಕತೆಯೆಂದು ಅನಿಸಿಕೊಳ್ಳುತ್ತದೆ. (ಮಾಲಿನಿಬಾಯಿ ಪಟೇಲ್ ಆಯ್ಕೆಯ ಮತ್ತು ದಂಪತಿಗಳ ಸಂಬಂಧ ಗಮನಿಸಿ). ಹಾಗಾಗದೆ ಆರೋಗ್ಯಕರವಾದ ದಾಂಪತ್ಯವೆಂದು ಹೇಳಬಹುದಾದ ಆಪ್ಟೆ ದಂಪತಿಗಳಲ್ಲಿ ಹೆಂಗಸು ಆಧುನಿಕ ವಿದ್ಯಾಭ್ಯಾಸದ ಹಿನ್ನೆಲೆಯಲ್ಲಿ ವಿಸ್ತರಿಸಿಕೊಳ್ಳುವ ಸಾಮಾಜಿಕ ಪಾತ್ರದ ಆಯಾಮಗಳ ಸೂಚನೆಯಿರುವಂತೆ ಗಂಡಸು ತನ್ನ ಪ್ರೀತಿ, ಪ್ರೇಮಗಳು ಮಾನವೀಯವಾಗಲು ಹೆಂಗಸಿನ 'ಪಾಲನೆ'ಯ ಕರ್ತವ್ಯಕ್ಕೆ ಸಂಬಂಧಪಟ್ಟ ಕೆಲವು ಕರ್ತವ್ಯಗಳನ್ನು ಬಳಗೊಳ್ಳುತ್ತಿರುವ

ಸೂಚನೆಗಳು ಇವೆ. ಒಂದೇ ಪ್ರಸಂಗದಲ್ಲಿ ಇವೆಲ್ಲವನ್ನು ಮಾರ್ಮಿಕವಾಗಿ ತಿಳಿಸುವ ಈ ಸಾಲುಗಳನ್ನು ನೋಡಿ :

'ಮುಂಜಾನೆ, ಆಪ್ಟೆ ಬಾಯಿಯ **ಹಿರಿಯ ಮಗಳಿಗೆ** ಆರಾಮಿಲ್ಲೆಂದೂ ಸ್ವಲ್ಪ ಬಂದು ನೋಡಿ ಹೋಗಬೇಕೆಂದೂ ಅವರ ಮನೆಯ ಅಡಿಗೆಯಾಕೆ ಬಂದು ಹೇಳಿದ್ದ ರಿಂದ ಶಶಿ ಸ್ನಾನ ವಗೈರೆ ಮುಗಿಸಿ ಅವರ ಬ್ಲಾಕಿಗೆ ಹೋದಳು. **ಶಾಂತಾಬಾಯಿ ಮನೆಯಲ್ಲಿ ಇರಲಿಲ್ಲ.** ಆಪ್ಟೆ ವಕೀಲ ಸಾಹೇಬರೇ ಹೊರಬಂದು 'ಯಾ. ಯಾ, ಡಾಕ್ಟರ್ ಬಾಯಿ' ಅಂತ ಮರಾಠಿಯಲ್ಲಿ ಸ್ವಾಗತಿಸಿದರು. ಶಶಿಯನ್ನು ಕರೆದು ಕೊಂಡು ಒಳಗೆ ಮಗಳು ಮಲಗಿದ್ದಲ್ಲಿಗೆ ಹೋದರು. **ತುಂಬ ಪ್ರೀತಿಯಿಂದ ಕಾಳಜಿಯಿಂದ, ಜ್ವರ ಬಂದು ಮಲಗಿದ್ದ ಮಗಳ ಹೊದಿಕೆ ಸರಿಸಿ** 'ವಿೂನೂ, ಡಾಕ್ಟರ್ ಬಂದಾರ ನೋಡು ಮಗೂ' ಅಂದರು. ಎದ್ದು ಕೂಡಲು ಅವಳಿಗೆ ಸಹಾಯ ಮಾಡಿದರು. ತನ್ನ ಕಿಟ್‌ಬ್ಯಾಗಿನಿಂದ ಶಶಿ ಸಿರಿಂಜ್ ತೆಗೆದಾಗ ತಾನೇ ಮುಂದಾಗಿ ಅದನ್ನ ತೆಗೆದುಕೊಂಡು ಸ್ಟೆರ್‌ಲೈಜ್ ಮಾಡಿಕೊಟ್ಟರು. 'ಏನೂ ಆಗುವುದಿಲ್ಲ ಮಗು ಆರಾಮಾಗುತ್ತಿ' ಅಂತ ಸಾಂತ್ವನ ಹೇಳಿದರು. ಅಡಿಗೆಯಾಕೆ ತಂದಿತ್ತ, ಚಹಾವನ್ನು ಶಶಿಗೆ ತಾವೇ ಕೊಟ್ಟು ಇನ್ನೊಂದನ್ನು ಮಗಳಿಗೆ ಕುಡಿಸಿದರು. **ಅದೆಲ್ಲ ನೋಡುತ್ತಿದ್ದಂತೆ ಶಶಿಗೆ ಈ ವ್ಯಕ್ತಿ ಈ ಹುಡುಗಿಯ ತಂದೆಯಲ್ಲ ತಾಯಿ ಅನ್ನಿಸಿತು.** ನಂತರ ಆಪ್ಟೆ ಹೋದರು. ಶಾಂತಾನದು ಇವತ್ತೊಂದು ಕೇಸ್ ಇತ್ತು. ನಾ ಫ್ರೀ ಇದ್ದೆ. ಅದಕ್ಕೆ ಮುಂಜಾನೆಯೆ ಆಕೆ ಕೋರ್ಟಿಗೆ ಹೋದಳು. ಮಗಳನ್ನು ನೋಡಿಕೊಳ್ಳಲಿಕ್ಕೆ ಅಂತ ನಾನು ಮನೆಯಾಗಿ ಉಳಿದೆ. ನಮ್ಮ ಶಾಂತಾನದು ನಿಮಗ ಗೊತ್ತಿಲ್ಲ. ನೂರಾ ಎಂಟು ಪರೋಪಕಾರದ ಪ್ರೋಗ್ರಾಮ್ಸ್ ಇರತಾವ ಆಕೀವು, ಏನೇನೋ ಪ್ರಿನ್ಸಿಪಲ್ಸ್ ಇಟ್ಟು ಗೊಂಡಾಳ....ಇಟ್ಟಗೊಂಡಾಳ ಅವುಗಳ ಸಲುವಾಗಿ ಹಗಲಿಡೀ ದುಡಿತಾಳ, ಪಾಪ ಆಕೀಗೆ ರೆಸ್ಟೇ ಸಿಗೂದಿಲ್ಲ– ನಾ ಎಷ್ಟ ಹೆಲ್ಪ್ ಮಾಡಿದ್ರೂ ಮತ್ತೆ ಆಕೀ ಕೆಲಸ ಆಕೀಗೆ ಸಾಕಷ್ಟು ಇರತಾವ (ಪುಟ–79—80)

ಮಾರ್ಕ್ಸ್ವಾದಿಗಳು ಹೇಳುವ Progressive Reversal ಸೂಚನೆಗಳು ಇವು. ಗಂಡಸಿನ ಪ್ರೇಮ, ಲೈಂಗಿಕ ವಿಜಯಗಳು (Sexual Exploits) ಆತನ ಸಂಪಾದನೆ, ಸ್ಥಾನಮಾನಗಳು ಇವುಗಳಿಂದ ಪಡೆದ ಕುಮ್ಮಕ್ಕೆಷ್ಟು ನಿಜವಾದುದೆಷ್ಟು ಎಂದು ತಿಳಿಯುವುದೇ ಇಲ್ಲ. ರಾಜಮಹಾರಾಜರುಗಳು ರಾಜಕುಮಾರರ ಪ್ರೇಮ ಪ್ರಸಂಗಗಳು, ಮದುವೆಗಳು, ಸಾಹಸಗಳು, ನಮ್ಮ ಸಂಸ್ಕೃತಿಯಲ್ಲಿ ಉದ್ದಕ್ಕೂ ಪ್ರಸ್ತಾಪವಾಗಿರುವುದು ಈ ಮಾತನ್ನು ಪುಷ್ಟೀಕರಿಸುತ್ತದೆ. ಪ್ರಗತಿಶೀಲ ಮನೋಧರ್ಮದ ಲೇಖಕಿ ಆಪ್ಟೆ ದಂಪತಿಗಳಂತವರಲ್ಲಿ ಪರ್ಯಾಯದ ಸೂಚನೆ ಕೊಡುವುದು. ಕನ್ನಡ ಸಾಹಿತ್ಯದ ಪರಂಪರೆಯ ಸಂದರ್ಭದಲ್ಲೂ ಮುಖ್ಯವೆನ್ನಿಸುವಂತಹುದು. ನವ್ಯ ಮನೋಧರ್ಮದ ಮುಖ್ಯ ಲೇಖಕರ ಪೈಕಿ ಇಂತಹ ಪರ್ಯಾಯವನ್ನು ಸೂಚಿಸಿದವರು

ಪರಿಶೀಲಸಿದವರು ಕಡಿಮೆ. (**ಇಲ್ಲವೇ ಇಲ್ಲ !**) ಕುಟುಂಬಗಳಲ್ಲಿ ಕಂಡುಬರುವ ವಿಫಲತೆಯನ್ನು ಒಪ್ಪಿಕೊಳ್ಳುವುದು, ಪರಿಶೀಲಿಸುವುದು ಸಾಂಪ್ರದಾಯಕ ಮನೋಧರ್ಮವನ್ನೆ ಸೂಚಿಸುವಂತಹುದು. ಏಕೆಂದರೆ ಈ ಮನೋಧರ್ಮ ಗಂಡಸು–ಹೆಂಗಸು ಇಬ್ಬರನ್ನು ಈಗಾಗಲೇ ವಿವಿಧರೀತಿಯ ಆಲೋಚನಾ ಕ್ರಮಗಳು ಗುರುತಿಸುವಂತೆ ಕಾಣುತ್ತಿದೆಯೇ ಹೊರತು ಹೊಸ ಮನೋಧರ್ಮಕ್ಕೆ ಅಗತ್ಯವಾದ ಮೇಲೆ ಸೂಚಿಸಿದ Progressive Revessal ನ ಹಿನ್ನೆಲೆಯಲ್ಲಿ ನೋಡುವುದಿಲ್ಲ.

ಇಷ್ಟೆಲ್ಲವನ್ನೂ ಸೂಚಿಸುತ್ತಾ, ನಮ್ಮ ಗಮನವನ್ನು ಸೆಳೆಯುವ ಈ ಕಿರುಕಾದಂಬರಿ ವಿಸ್ತೃತ ವಾಗಿರಬೇಕಾಗಿತ್ತಲ್ಲವೆ ಎಂದು ಆಸೆ ಪಡುವುದರ ಜೊತೆಗೆ ಇನ್ನೊಂದು ಮುಖ್ಯ ಪ್ರಶ್ನೆ ಎತ್ತಿ ಈ ಲೇಖನವನ್ನು ಮುಗಿಸುತ್ತೇನೆ. ಕಮಲಳ ಪಾತ್ರ ಎಷ್ಟು ಪ್ರಾತಿನಿಧಿಕವಾದದು ? ಆಕೆ ಒಬ್ಬ ಸೂಕ್ಷ್ಮಮತಿ ಎನಿಸಿದರು 'ಕಲಾವಿದೆಯು' ವ್ಯಕ್ತಿತ್ವದಲ್ಲಿರುವ Neurosis Indulgence ಎಲ್ಲವೂ ಅವಳಲ್ಲಿ ತುಂಬಿಕೊಂಡಿವೆ. ಶಿವಮೂರ್ತಿಯೊಡನೆ ಅವಳ ಹೊರಗಿನ ಒಡನಾಟಗಳು ಮದುವೆಯ ಸಂಬಂಧ ಎನ್ನುವುದಕ್ಕಿಂತ ಮುಖ್ಯವಾಗಿ ಆ ಸಂದರ್ಭದಲ್ಲಿ ಪರಸ್ಪರ ಗೌರವ, ತಿಳುವಳಿಕೆ ಇಲ್ಲ ಎನ್ನುವುದು ಮತ್ತು ಮನುಷ್ಯ ಸಂಬಂಧದಲ್ಲಿನ ಏಳು ಬೀಳುವಿನ ಗತಿಶೀಲತೆಯನ್ನು ನಿರಾಕರಿಸುವ ಅವಳ ಮನೋಧರ್ಮ ಮುಖ್ಯವಾದದ್ದು. ಈ ಮಾತುಗಳನ್ನು ಗಮನಿಸಿ 'ಶಿವಮೂರ್ತಿ ಇಲ್ಲದ ಜೀವನವನ್ನು ನಾನು ಕಲ್ಪಿಸಲೂ ಸಾಧ್ಯವಿಲ್ಲ. ಆತ ಬೇರೊಬ್ಬರ ಗಂಡನೇ ಆಗಿರಲಿ, ಹಲವು ಮಕ್ಕಳ ತಂದೆಯೇ ಆಗಿರಲಿ ಕೊಲೆಗಡುಕನೆ ಆಗಿದ್ದರೂ ಸಹ ಅವನು ನನಗೆ ಬೇಕು'. (ಪುಟ 33) 'ಮೂರ್ತಿ ನನ್ನನ್ನು ಅಲಕ್ಷಿಸುತ್ತಿದ್ದಾನೆ. ಆತನಲ್ಲಿ ಮೊದಲಿನ ಆ ಆರಾಧಿಕ ಭಾವ ತನ್ಮಯತೆ, ಉತ್ಕಟತೆ, ಉನ್ಮಾದ, ಉಳಿದಿಲ್ಲ. ಇದು ಸಹಜ ಕ್ರಿಯೆಯಾಗಿರಬಹುದು. ಆದರೆ ನನ್ನ ಮಟ್ಟಿಗೆ ಸಹಿಸಲಸಾಧ್ಯವಾದ ಅಸತ್ಯ (ಪುಟ 44)

ಈ ಪ್ರಶ್ನೆಯ ಉದ್ದೇಶ ಇಷ್ಟು. ಕಮಲಳ ಡಾಯಿರಿಯ ಮೂಲಕ ಇಡೀ ಬರವಣಿಗೆಯ ಘಟನಾವಳಿಗಳನ್ನು ಉಳಿದ ಪಾತ್ರಗಳನ್ನು ನೋಡಬೇಕೆಂಬ ಆಸೆ ಲೇಖಕರಿಗಿರುವುದರಿಂದ ಅದನ್ನೆ ಪ್ರಧಾನ ಭೂಮಿಕೆಯಾಗಿ ಮಾಡಿಕೊಳ್ಳಲಾಗಿದೆ. ಆದರೆ ಬರವಣಿಗೆಯ ಬೇರೆ ವಿವರಗಳು (ಉದಾ:) ಆಪ್ತೆ ದಂಪತಿಗಳಿಗೆ ಸಂಬಂಧಿಸಿದ ಹಾಗೆ ನಾನು ಉದ್ಧರಿಸಿರುವುದು) ಘಟನಾವಳಿಗಳನ್ನು ಕುರಿತು ನಾವು ಮಾಡುವ ವಿಶ್ಲೇಷಣೆಗೆ ಇವರ ನೆರವೇ ಬೇಕಾಗುವುದಿಲ್ಲ. ಕಮಲಳ ಬಿಕ್ಕಟ್ಟಿನ ವಿವಿಧ ಸ್ವರೂಪಗಳನ್ನು, ಹಂತಗಳನ್ನು ಬೇರೆ ಬೇರೆ ಪಾತ್ರಗಳು ಸೂಚಿಸುವುದರಿಂದ ಮತ್ತು ಅವುಗಳುಕೂಡ ಬರವಣಿಗೆಯಲ್ಲಿ ಪರಿಶೀಲನೆಗೆ ಒಳಗಾಗುವುದರಿಂದ ಕಮಲಳ ವ್ಯಕ್ತಿತ್ವದ ಮೂಲಕ ಬರವಣಿಗೆಗೆ ದಕ್ಕುವ ರೋಚಕತೆ, ಆಕರ್ಷಣೆ ಅಷ್ಟು ಮುಖ್ಯವೆನಿಸುವುದಿಲ್ಲ.

ಹೆಂಗಸಿನ ಬಂಡಾಯ ಮತ್ತು ಸ್ವಾತಂತ್ರ್ಯ ಕುರಿತು ನಮ್ಮ ಸಂಸ್ಕೃತಿ ಸಿದ್ಧ

ಗೊಳಿಸುತ್ತಿರುವ ಮುಖ್ಯ ಕೃತಿಯೊಂದರ ಪ್ರಾರಂಭದ ಮತ್ತು ಮುಖ್ಯವಾದ ಹಂತ ಇದೆಂದೇ ನಾನು ಭಾವಿಸುತ್ತೇನೆ. ಆ ಕೃತಿಯನ್ನು ವೀಣಾ ಅವರೆ ಬರೆಯಬಹುದು ಅಥವಾ ಬೇರೆಯವರೇ ಬರೆಯಬಹುದು. ಆದರೆ ಹಾಗೆ ಬರೆಯಬೇಕಾದಾಗ ಬೇಕಾಗುವ ಪ್ರಾಮಾಣಿಕತೆ ಮತ್ತು ಸಮಸ್ಯೆಯ ಸಂಕೀರ್ಣ ಸ್ವರೂಪವನ್ನು ಈಗಾಗಲೇ ವೀಣಾ ಸಮರ್ಥವಾಗಿ ಸೂಚಿಸಿದ್ದಾರೆ ಎನ್ನುವುದೇ ಈ ಕೃತಿಯ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಮಹತ್ವವನ್ನು ಸೂಚಿಸುತ್ತಿವೆ. ●

---

[ಶ್ರೀಮತಿ ಸರ್ವಮಂಗಳ ಮತ್ತು ಕೆ. ವಿ. ನಾರಾಯಣ್ ಅವರೊಡನೆ ನಡೆಸಿದ ಚರ್ಚೆ ಈ ಲೇಖನಕ್ಕೆ ಪ್ರೇರಣೆಯಾಗಿದೆ. ನನ್ನ ವಿಶ್ಲೇಷಣೆಗೆ ನೆರವಾಗುವಂತಹ ಅವರ ಕೆಲವು ವಿಚಾರಗಳನ್ನು ಕೂಡ ನಾನು ಉಪಯೋಗಿಸಿಕೊಂಡಿದ್ದೇನೆ]

---

"ಸ್ತ್ರೀ ಸ್ವಾತಂತ್ರ್ಯ ಅನಿವಾರ್ಯವಷ್ಟೆ ಅಲ್ಲ, ಅದು ಇಷ್ಟವಾದುದು ಎಂದು ಇಲ್ಲಿ ನಾವು ಹೇಳುವುದು ಅದೇ ಉದ್ದೇಶದಿಂದ. ಹೆಣ್ಣು ನಿಸರ್ಗದಿಂದಲೆ ಗಂಡಿನ ಶತ್ರು. ಆಕೆಗೆ ಈಗ ಸ್ವಾತಂತ್ರ್ಯ ದೊರೆತರೆ ಸಮಾಜವೆ ಬುಡಮೇಲಾಗುವುದು ಎಂದು 'ಅಭಿವೃದ್ಧಿ ಹೊಂದಿದ' ಎನ್ನಿಸಿಕೊಳ್ಳುವ ದೇಶಗಳಲ್ಲೂ ಹೇಳಲಾಗುತ್ತಿದೆ. ಇದರಲ್ಲಿ ಸತ್ಯದ ಪ್ರೇಮಕ್ಕಿಂತ ಭೀತಿಯೆ ಹೆಚ್ಚಾಗಿದೆ. ಇದುವರೆಗೆ, ಸಾವಿರಾರು ವರ್ಷಗಳಿಂದ, ತನ್ನ ದಬ್ಬಾಳಿಕೆಗೆ ಒಳಪಡಿಸಿದ್ದಕ್ಕಾಗಿ ಪ್ರತೀಕಾರ ಬಂದೀತೆಂಬ ಭೀತಿ ಇದೆ, ಗಂಡಿಗೆ. ಆದರೆ ಕುಟುಂಬ ಪದ್ಧತಿ ಹೋಗಬೇಕಾದರೆ ಸ್ತ್ರೀಯರಿಗೆ, ಸ್ವಾತಂತ್ರ್ಯ ಅಗತ್ಯ. ಸ್ತ್ರೀಯಳಿಗೆ ಸ್ವಾತಂತ್ರ್ಯ ಸಿಕ್ಕರೆ ಗಂಡಸಿನ ಏಕಾಧಿಕಾರತ್ವ ಇಲ್ಲದಾಗುವುದು, ಏಕಾಧಿಕಾರತ್ವಕ್ಕಾಗಿಯೆ ಕುಟುಂಬದಂತಹ ಉಪಯುಕ್ತ ಸಂಸ್ಥೆ ಸ್ಥಿರವಾಗಿದೆ. ಆದುದರಿಂದ ಯಾವ ಸಂಸ್ಥೆಯಾದರೂ ಸ್ಥಿರವಾಗಬೇಕಾದರೆ ಏಕಾಧಿಕಾರಿತ್ವದ ಅಗತ್ಯ ಎಂದು ಇದುವರೆಗೆ ಇಟ್ಟುಕೊಂಡ ನಂಬಿಕೆ ಕ್ರಮೇಣ ಪೊಳ್ಳಾಗುವುದು."

**ಶ್ರೀರಂಗ**
'ಮಾನವನ ಮೃತ್ಯುಪತ್ರ

# ನೈಸರ್ಗಿಕ ಶಿಲೆಗಳಲ್ಲಿ ಕಾಣದ ಕೈಗಳ ಕಲೆ

ಡಾ॥ ಹೆಚ್. ಚಂದ್ರಶೇಖರ

## ಮಾನವನ ಕಲೆ

ಯಾವ ರೂಪವನ್ನಾಗಲೀ, ಚೆಲುವನ್ನಾಗಲೀ ಹೊಂದಿರದ ಸಾಮಾನ್ಯ ಕಾಡುಗಲ್ಲನ್ನು (Raw Stone) ನುರಿತ ನಿಪುಣ ಹಾಗೂ ಕಲಾತ್ಮಕ ದೃಷ್ಟಿಯುಳ್ಳ ಶಿಲ್ಪಿಯು ಸುಂದರ ಶಿಲ್ಪಗಳನ್ನಾಗಿ ಮಾರ್ಪಡಿಸುವುದನ್ನು ನಾವೆಲ್ಲ ಕಂಡಿದ್ದೇವೆ. ಕಣ ಶಿಲೆಯಲ್ಲಿ (Granite) ಕಟೆಯಲಾದ ಶ್ರವಣ ಬೆಳಗೊಳದ ಗೊಮ್ಮಟ, ಬೆಸಾಲ್ಟ್ ಶಿಲೆಯಲ್ಲಿ ಕಟೆಯಲಾದ ಅಜಂತಾದ ನಿರ್ವಾಣ (ಮಲಗಿರುವ) ಬುದ್ಧ, ಕಣಶಿಲೆಯಲ್ಲಿ ಕಟೆಯಲಾದ **ಚಾಮುಂಡಿ** ಬೆಟ್ಟದ ನಂದಿ, ಲೇಪಾಕ್ಷಿಯ ನಂದಿ, ಮತ್ತು ಶಿವಗಂಗೆಯ (ತುಮಕೂರು ಜಿಲ್ಲೆ) ನಂದಿ, ಕಾಂಡೋಲೈಟ್ ಶಿಲೆಯಲ್ಲಿ ನಿರ್ಮಿತವಾದ ಕೋನಾರ್ಕದ ಆನೆ: ಇತ್ಯಾದಿ ಶಿಲ್ಪಗಳು ನಮ್ಮ ಶಿಲ್ಪಿಗಳ ಕರ ಕೌಶಲ್ಯಕ್ಕೆ ಉತ್ಕೃಷ್ಟ ನಿದರ್ಶನಗಳು.

ಶಿಲ್ಪಿಯು ತನ್ನ ಕಲ್ಪನೆಯ ರೂಪವನ್ನು ಗಟ್ಟಿಯಾದ ಶಿಲೆಯಲ್ಲಿ (ಉದಾ :— ಕಣಶಿಲೆ, ಬೆಸಾಲ್ಟ್ ಶಿಲೆ) ಅಥವಾ ಮೆದುವಾದ ಶಿಲೆಯಲ್ಲಿ (ಉದಾ :—ಬಳಪದ ಕಲ್ಲು) ಸುಂದರವಾಗಿ ಮೂಡಿಸುವುದಕ್ಕೆ ಬಗೆ ಬಗೆಯ ಜಾಣ, ಗರಗಸ, ಸುತ್ತಿಗೆ ಇತ್ಯಾದಿ ಉಪಕರಣಗಳನ್ನು ಉಪಯೋಗಿಸುತ್ತಾನೆ. ಸೂಕ್ತ ಕಲ್ಲಿಗೆ ಸೂಕ್ತ ರೀತಿ ಯಲ್ಲಿ ಹೊಡೆದು, ಕೊರೆದು ಸುಂದರ ಶಿಲ್ಪವನ್ನು ನಿರ್ಮಿಸುತ್ತಾನೆ. ಆಯಾ ಕಲ್ಲಿನ ನೈಸರ್ಗಿಕ ಗುಣಗಳು, ಕಲಾವಿದನ ದೃಷ್ಟಿ ಮತ್ತು ಅವನ ಕೈಗಳು ಸುತ್ತಿಗೆಯ ಮೇಲೆ ಪಡೆದಿರುವ ಹಿಡಿತ ಇತ್ಯಾದಿ ಅಂಶಗಳು ಈ ಬಗೆಯ ಕಲಾಸೃಷ್ಟಿಯನ್ನು ನಿಯಂತ್ರಿಸುತ್ತವೆ. ಇಂಥ ಕಲೆ ಸೃಷ್ಟಿಯಾಗುವುದನ್ನು ನಾವು ಕಣ್ಣಾರೆ ಕಾಣ ಬಹುದು. ಈ ಬಗೆಯ ಕಲೆಯ ನಿರ್ಮಾಣಕ್ಕೆ ಒಂದೆರಡು ವರ್ಷಗಳು ಅಥವಾ ಅಪ ರೂಪವಾಗಿ ಒಂದೆರಡು ದಶಕಗಳು ಬೇಕಾಗಬಹುದು. ಅಂದರೆ ಇದರ ನಿರ್ಮಾಣ ಕ್ರಿಯೆ ದೃಶ್ಯ, ಕಾಲ ಸೀಮಿತ.

## ಪ್ರಕೃತಿಯಲ್ಲಿ ಕಲೆ

ನೋಡುವ ಕಣ್ಣುಗಳಿದ್ದರೆ ಅರಿಯುವ ಬುದ್ಧಿ ಮತ್ತು ಕೊಂಚ ಕಲ್ಪನಾಶಕ್ತಿ ಇದ್ದರೆ, ನಿಸರ್ಗದಲ್ಲಿ ಈ ಬಗೆಯ ಶಿಲ್ಪಗಳನ್ನು ನಾವು ನೋಡಬಹುದು. ಆಗ ಬೆಟ್ಟ ಗುಡ್ಡಗಳು ಒಂದೊಂದಾಗಿಯೋ, ಸಾಲುಗೊಂಡಾಗಿಯೋ ಅಥವಾ ಗುಡ್ಡಗಳಲ್ಲಿರುವ ವಿವಿಧ ಆಕಾರ ಮತ್ತು ಅಳತೆಯ ಬಂಡೆಗಳು ಮಾನವಾಕೃತಿಯನ್ನೋ ಪ್ರಾಣಿ

ಯನ್ನೋ, ಸುಂದರ ಸ್ತಂಭರಾಜಿಯನ್ನೋ ಹೋಲುವುದನ್ನು ನಾವು ನಿಸರ್ಗದಲ್ಲಿ ಕಾಣಬಹುದು.

ಈ ಬಗೆಯ ಶಿಲ್ಪನಿರ್ಮಾಣಕ್ಕೆ ಆಯಾ ಶಿಲೆ ಮತ್ತು ಶಿಲೆಯಲ್ಲಿರುವ ಸಂದುಗಳ (Joints) ಛೇಧಗಳ (Fractures) ಮತ್ತು ಬಿರುಕುಗಳ (Fissures) ವಿನ್ಯಾಸ ಬಹುಮಟ್ಟಿಗೆ ಕಾರಣ. ಆಯಾ ಪ್ರದೇಶದ ವಾಯುಗುಣ, ಹರಿಯುವ ನದಿ, ಬೀಸುವ ಗಾಳಿ, ಕೊರೆಯುವ ಹಿಮ, ಶಿಲ್ಪಿಯ ಕೈಗಳ ಕೆಲಸವನ್ನು ಮಾಡುತ್ತವೆ. ಈ ತೆರನ ಶಿಲ್ಪಸೃಷ್ಟಿಯ ಕ್ರಿಯೆಯು ಅದೃಶ್ಯ ಮತ್ತು ಬೇಕಾದ ಕಾಲ ಅಪಾರ.

## ಶಿಥಿಲೀಕರಣದಿಂದ ಕಲಾಸೃಷ್ಟಿ

ಕೆಲವೊಂದು ಶಿಲೆಗಳು ಗಟ್ಟಿಯಾಗುವುದಕ್ಕಿಂತ ಮೊದಲು ದ್ರವರೂಪದಲ್ಲಿರುತ್ತವೆ. ಈ ದ್ರವರೂಪಕ್ಕೆ ಶಿಲಾಪಾಕ (Magma) ಎಂದು ಹೆಸರು. ಈ ಶಿಲಾಪಾಕ ಕೋಟ್ಯಾವಧಿ ವರ್ಷಗಳ ಹಿಂದೆ ಭೂಮಿಯ ಅತಿ ಆಳದಲ್ಲಿ ತಣ್ಣಗಾಗಿ ಶಿಲೆಯಾಗುವಾಗ ಕೆಲಬಗೆಯ ಸಂದುಗಳು ಹುಟ್ಟುತ್ತವೆ. ಇಂಥ ಶಿಲೆಯು ಭೂಮಿಯ ಮೇಲೆ ಮತ್ತು ಒಳಗಡೆ, ಉಷ್ಣತೆ ಮತ್ತು ಒತ್ತಡಗಳಲ್ಲಿ ಉಂಟಾಗುವ ಅಗಾಧ ಪ್ರಮಾಣದ ಅಥವಾ ಅಲ್ಪಪ್ರಮಾಣದ ಬದಲಾವಣೆಗಳಿಗೆ ಸ್ಪಂದಿಸುತ್ತದೆ. ಇದರಿಂದಾಗಿ ಬಂಡೆಗಳಲ್ಲಿ ಬಿರುಕುಗಳು ಅಥವಾ ಛೇದಗಳು ಹುಟ್ಟುತ್ತವೆ. ಈ ಬಿರುಕುಗಳಲ್ಲಿ ಸಂಗ್ರಹವಾಗುವ ನೀರು ಅಥವಾ ಹಿಮ ಉಷ್ಣಮಾನದ ಬದಲಾವಣೆಗೆ ಅನುಗುಣವಾಗಿ ಹಿಗ್ಗುತ್ತವೆ ಮತ್ತು ಕುಗ್ಗುತ್ತವೆ. ಈ ಹಿಗ್ಗುವಿಕೆ ಮತ್ತು ಕುಗ್ಗುವಿಕೆ ಬಂಡೆಯ ಮೇಲೆ ಒತ್ತಡ ಹಾಕಿ ಹೆಬ್ಬಂಡೆಗಳನ್ನು ಸಣ್ಣ ಬಂಡೆಗಳನ್ನಾಗಿಸುತ್ತವೆ. ಈ ಕ್ರಿಯೆಯನ್ನು ಭೂವಿಜ್ಞಾನಿಗಳು ಭೌತಿಕ ಅಥವಾ ಯಾಂತ್ರಿಕ ಶಿಥಿಲೀಕರಣ Physical or Mechanical Weathering) ಎಂದು ಕರೆಯುತ್ತಾರೆ. ಹರಿಯುವ ನೀರು, ಬೀಸುವ ಗಾಳಿ, ಹಿಮ ಇಂಥ ಶಿಥಿಲೀಕರಣದ ಕೈಗಳು.

ಮಳೆಯ, ನೀರು ಮೂಲತಹ ರಾಸಾಯನಿಕವಾಗಿ ನಿಷ್ಕ್ರಿಯವಾದ ವಸ್ತು. ಆದರೆ ಅದು ಗಾಳಿಯೊಳಗಿಂದ ಹಾದುಬರುವಾಗ ಗಾಳಿಯಲ್ಲಿರುವ ಕೆಲಬಗೆಯ ಅನಿಲಗಳನ್ನು ಅತ್ಯಲ್ಪ ಪ್ರಮಾಣದಲ್ಲಿ ಹೀರಿಕೊಳ್ಳುತ್ತದೆ. ಮಳೆಯ ನೀರು ಭೂಮಿಯನ್ನು ತಲುಪಿದ ನಂತರ ಮಣ್ಣಿನಲ್ಲಿರುವ ಕೆಲ ಸಾವಯುವ ಆಮ್ಲಗಳು (Organic Acids) ಮಳೆಯ ನೀರಿನಲ್ಲಿ ಬೆರೆತಾಗ ನೀರು ರಾಸಾಯನಿಕವಾಗಿ ಸಕ್ರಿಯಶಕ್ತಿಯನ್ನು ಪಡೆಯುತ್ತದೆ. ಇಂಥ ಸಕ್ರಿಯಶಕ್ತಿಯ ನೀರಾ ಶಿಲೆಯಲ್ಲಿರುವ ಖನಿಜಗಳ ಮೇಲೆ ರಾಸಾಯನಿಕ ಪರಿಣಾಮ ಬೀರುತ್ತದೆ. ಇದರಿಂದ ಒಂದು ಖನಿಜವು ವಿಘಟಿತವಾಗಿ ಬೇರೆ ಒಂದು ಅಥವಾ ಎರಡು ಖನಿಜಗಳು ಹುಟ್ಟುತ್ತವೆ. ಇಂಥ ರಾಸಾಯನಿಕ ಕ್ರಿಯೆಗೆ ಒಳಗಾದ ಫೆಲ್‌ಸ್ಪಾರ (Felspar) ಎಂಬ ಖನಿಜವು (ಇದು ಕಣಶಿಲೆಯಲ್ಲಿ ಬಹು ಪ್ರಮುಖ ಖನಿಜ)ವಿಘಟಿತಗೊಂಡು ಜೇಡಿಯನ್ನು (Clay) ನೀಡುತ್ತದೆ. ಇಂಥ

ಕ್ರಿಯೆಯನ್ನು ರಾಸಾಯನಿಕ ಶಿಥಿಲೀಕರಣ (Chemical Weathering) ಎಂದು ಕರೆಯಲಾಗುತ್ತದೆ.

ಈ ಎರಡು ಬಗೆಯ ಶಿಥಿಲೀಕರಣ ಕ್ರಿಯೆಗಳು ಒಂದಕ್ಕೊಂದು ಪೂರಕ. ಕೆಲವೊಂದು ಸಲ ಕೆಲವೊಂದು ಕಡೆ ಭೌತಿಕ ಕ್ರಿಯೆಯು ಮೇಲುಗೈಯನ್ನು ಪಡೆದರೆ ಬೇರೆ ಕಾಲದಲ್ಲಿ ಅಥವಾ ಬೇರೆ ಸ್ಥಳದಲ್ಲಿ ರಾಸಾಯನಿಕ ಕ್ರಿಯೆಯು ಮೇಲುಗೈಯನ್ನು ಪಡೆಯುತ್ತದೆ. ಈ ಎರಡು ಕ್ರಿಯೆಗಳ ಒಟ್ಟು ಪರಿಣಾಮದಿಂದಾಗಿ ಸಂದುಗಳಿಂದ ಕೂಡಿದ ಕಣಶಿಲೆಯ ಸಮೂಹವು ತನ್ನ ಮೊನೆಗಳನ್ನು ಕಳೆದುಕೊಂಡು ಗೋಲಾಕಾರವನ್ನು ಪಡೆದರೆ, ಕೆಲವೊಂದು ಸಲ ಗೋಲಾಕಾರದ ಶಿಲೆಯು ಕೋನಾಕಾರವನ್ನು ಪಡೆಯುತ್ತದೆ.

ಇಂಥ ಶಿಥಿಲೀಕರಣ ಕ್ರಿಯೆಯು ಅತ್ಯಂತ ಸಾವಕಾಶವಾಗಿ, ಅಂದರೆ ನಿರಂತರವಾಗಿ ಕೋಟ್ಯಾವಧಿ ವರ್ಷಗಳಿಂದ ನಡೆಯುತ್ತಾ ಬಂದಿದೆ: ಈಗಲೂ ನಡೆಯುತ್ತಿದೆ. ಮುಂದೆಯೂ ನಡೆಯುತ್ತದೆ. ಈ ಶಿಥಿಲೀಕರಣ ಕ್ರಿಯೆಯಿಂದಾಗಿ ನಮ್ಮ ರಾಜ್ಯದ ಬೆಟ್ಟಗಳಲ್ಲಿ ಮತ್ತು ಬಂಡೆಗಳಲ್ಲಿ ನಿರ್ಮಾಣಗೊಂಡಿರುವ ಹಲವಾರು ನೈಸರ್ಗಿಕ ಶಿಲ್ಪಗಳಲ್ಲಿ ಕೆಲವನ್ನು ನಾನಿಲ್ಲಿ ವಿವರಿಸುತ್ತೇನೆ.

## ಮಲಗಿರುವ ಬುದ್ಧನ ಬೆಟ್ಟ

ಇಂಥ ನೈಸರ್ಗಿಕ ಶಿಲ್ಪಗಳಲ್ಲಿ ಮೊದಲಿಗೆ ನಿರ್ವಾಣ ಬುದ್ಧನಿಗೆ ನಮಿಸೋಣ ಬನ್ನಿ. ಅಂಜತಾದ ನಿರ್ವಾಣ ಬುದ್ಧನ ಮೂರ್ತಿಯನ್ನು ನೋಡಿದವರೆಲ್ಲ ಭಕ್ತಿಯಿಂದ ನಮಿಸುತ್ತಾರೆ. ಅಷ್ಟು ಶಾಂತ, ಸುಂದರವಾಗಿದೆ ಈ ಶಿಲ್ಪ. ಇದನ್ನು ಬೇಸಾಲ್ಟ್ ಶಿಲೆಯಲ್ಲಿ ಕಟೆದಿದ್ದಾನೆ, ಅಂದಿನ ನಮ್ಮ ಕನ್ನಡಿಗ. ಆದರೆ ಈಗ ವರ್ಣಿಸುತ್ತಿರುವುದು ಈಗಲೂ ಕರ್ನಾಟಕದಲ್ಲಿರುವ ನಿಸರ್ಗದ ಕಾಣದ ಕೈಗಳು ಕಟೆದಿರುವ ಬುದ್ಧನ ಬೆಟ್ಟ, ಕಲ್ಬುರ್ಗಿ ಜಿಲ್ಲೆಯ ಶಹಾಪುರ ನಗರದಿಂದ ಸುಮಾರು ಒಂದೂವರೆ ಕಿಲೋಮೀಟರ್ ದೂರದಲ್ಲಿದೆ. ನೆಲದಿಂದ ಸುಮಾರು ನೂರಆರು ಮೀಟರ್ ಎತ್ತರವಿರುವ ಬೆಟ್ಟಗಳ ಸಾಲುಗಳು ಒಂದು ನಿರ್ದಿಷ್ಟ ಸ್ಥಳದಲ್ಲಿ ನಿಂತು ನೋಡಿದರೆ ನಿರ್ವಾಣ ಬುದ್ಧನ ದರ್ಶನವಾಗುತ್ತದೆ. ಈ ಬೆಟ್ಟಕ್ಕೆ ಎದುರಾಗಿ ನಿಂತಾಗ, ನಮ್ಮ ಬಲಕ್ಕೆ ಗುಂಗುರಕೂದಲುಗಳುಳ್ಳ ಬುದ್ಧನ ತಲೆ, ಹರವಾದ ಹಣೆ, ಮತ್ತು ಚೂಪಾದ ಮೂಗು ಕಾಣುತ್ತವೆ. ಕಟಿಯ ಮೇಲೆ ಮಡಚಿದ ಕೈಗಳು ಮತ್ತು ತೊಡೆಗಳು ನಮ್ಮ ಎಡಕ್ಕಿವೆ. ಈ ಬಗೆಯ ಆಕಾರಕ್ಕೆ ಇಲ್ಲಿಯ ಸಣ್ಣ ಸಣ್ಣ ಗುಡ್ಡಗಳಲ್ಲಿರುವ ವಿವಿಧ ಅಳತೆಯ ವಿವಿಧ ಆಕಾರದ ಕಣಶಿಲೆಯ ಬಂಡೆಗಳು ಕಾರಣ. ಈ ಬೆಟ್ಟವನ್ನು ಬೆಳದಿಂಗಳಲ್ಲಿ ಕಂಡ ಕವಿ ಶ್ರೀ.ಬಿ. ಎ. ಸನದಿಯವರು ಒಂದು ಸುಂದರ ಸುನೀತವನ್ನೂ ರಚಿಸಿದ್ದಾರೆ;

ತುಂಬು ಬೆಳ್ದಿಂಗಳಲಿ ಸಗರನಾಡಗಸೆಯಲಿ
ಬೆಟ್ಟದೆಡೆ ಬೆರಗುಗಣಿ ಹರಿಸಿದಾ ಹೊತ್ತಿನಲಿ
ಕಂಗೊಳಿಸಿ ಮನಸೆಳೆದು "ಎಲೆ ಪ್ರಬುದ್ಧನೆ ನಿಲ್ಲು"
ಎಂದೆಮ್ಮ ಕೀಲಿಸುವದೊಂದು ಬಂಡೆ ಗಲ್ಲು.

ಯಾರಿಟ್ಟರೋ ಇಲ್ಲಿ ಈ ಪ್ರತಿಮೆಯನು ಕಟೆದು
ಮಲಗಿರುವ ಬುದ್ಧನಿವ ಮುಗಿಲ ಮೌನವ ಕುಡಿದು
ಒಡಲುರಿಯನಾರಿಸುವ ರೀತಿಯಲ್ಲಿ ಕೈಯಿಟ್ಟು
ಕಲ್ಲುಮಂಚದ ಮೇಲೆ ನೀರ್ಗಾಲುಗಳ ಚಾಚಿ.

ಅದೇ ತಲೆ, ಆ ಕೂದಲು, ಅವೇ ತುಟಿ ಆ ನಗೆಯು
ಅದೇ ಎದೆ ಆ ಹರವು, ಅದೇ ಆಕೃತಿ ಆ ಚೆಲುವು
ಆ ಬುದ್ಧನ ವಿಶ್ರಾಂತಿಗೆ ಈ ಬೆಟ್ಟದ ನೆಲವು
ಬಿರಿದಂತಿದೆ ಆ ತಪದಲಿ ಬುವಿಯೊಡಲಿನ ಬಗೆಯು.

ಈ ಸೃಷ್ಟಿಯ ಶಿಲ್ಪಾಕೃತಿ ಕಂಡರಸಿದ ದೃಷ್ಟಿ
ಜಗಕೀವುದು ಆ ದರ್ಶನದೀ ದೀಪ್ತಿಯ ತುಷ್ಟಿ

ಮುಂದೆ ಎಂದಾದರೂ ನೀವು ದೂರದ ಈ ಊರಿಗೆ ಹೋದರೆ ತಪ್ಪದೆ ಮಲಗಿರುವ ಬುದ್ಧನ ಈ ಬೃಹತ್ ಶಿಲ್ಪವನ್ನು ನೋಡಿ ಸನದಿಯವರಂತೆ ದೀಪ್ತಿಯ ತುಷ್ಟಿಯನ್ನು ಪಡೆಯಿರಿ.

### ಶಿಲಾ ಆನೆ

ಚಿತ್ರದುರ್ಗದ ಕೋಟೆಯನ್ನು ನೋಡಲು ಹೋಗುವ ಪ್ರವಾಸಿಗರ ಸಂಖ್ಯೆ ಇತ್ತೀಚೆಗೆ ಹೆಚ್ಚಾಗಿದೆ. ಚಿತ್ರದುರ್ಗದ ಕೋಟೆಯ ನಿರ್ಮಾಣ ಭದ್ರತೆ ಮತ್ತು ಅದರ ಭವ್ಯತೆ ಇವುಗಳಿಗೆ ಅಲ್ಲಿರುವ ದೊಡ್ಡ ಹರಳುಗಳ ಕಣಶಿಲೆ ಬಹುಮಟ್ಟಿಗೆ ಕಾರಣ. ಇದರ ನಿರ್ಮಾಪಕರು ಬೆಟ್ಟಗಳ ಭೂವ್ಯಾಕೃತಿ (Land scape)ಮತ್ತು ಬಂಡೆಗಳ ಭೌತಿಕ ಗುಣಗಳನ್ನು ಅರಿತಿದ್ದರು. ಚಿತ್ರದುರ್ಗದ ಕೋಟೆಯನ್ನು ಪ್ರವೇಶಿಸಿದ ನಂತರ ಸ್ವಲ್ಪ ದೂರದಲ್ಲಿರುವ ಗಣಪತಿ ಮಂದಿರದ ಹಿಂದಿರುವ ಬಂಡೆಯನ್ನು ಬಹುಪಾಲು ಜನ ಅದರ ಪಕ್ಕದ ದಾರಿಯಲ್ಲಿ ನಡೆಯುತ್ತಿದ್ದರೂ ಗಮನಿಸುವುದಿಲ್ಲ. ಒಂದು ನಿರ್ಧಿಷ್ಟ ಸ್ಥಳದಲ್ಲಿ ನಿಂತು ನೋಡಿದರೆ, ಮುಂಗಾಲುಗಳನ್ನು ನೆಲಕ್ಕೆ ಊರಿದ ಆನೆಯನ್ನು ಹೋಲುತ್ತದೆ ಈ ಕಣಶಿಲೆಯ ಬಂಡೆ. ನೀವು ಎಂದಾದರೂ ಚಿತ್ರದುರ್ಗಕ್ಕೆ ಹೋದಾಗ ಕೋಟೆಯನ್ನು ನೋಡಲು ಹೋದರೆ ಈ ನಿಸರ್ಗ ನಿರ್ಮಿತ ಶಿಲಾ ಆನೆಯನ್ನು ನೋಡಲು ಮರೆಯಬೇಡಿ.

## ನಾಯಿ ಕೊಡೆ

ಮಳೆಗಾಲದ ಪ್ರಾರಂಭದಲ್ಲಿ ತಿಪ್ಪೆಗಳಲ್ಲಿ ನಾಯಿಕೊಡೆಗಳು ಹುಟ್ಟಿಕೊಳ್ಳುವುದನ್ನು ನೀವು ನೋಡಿರಬಹುದಲ್ಲವೆ? ಚಿತ್ರದುರ್ಗದ ಬಳಿಇರುವ ನಮ್ಮ ಪುರಾತನ, ಇತಿಹಾಸದ ದೃಷ್ಟಿಯಿಂದ ಪ್ರಮುಖ ಸ್ಥಳವಾದ ಚಂದ್ರವಳ್ಳಿಗೆ ಹೋಗಿ ಅಲ್ಲಿರುವ ಭವ್ಯ ಧವಳಪ್ಪನ ಬೆಟ್ಟವನ್ನು ಹತ್ತೋಣ ಬನ್ನಿ. ಸ್ವಲ್ಪ ಹತ್ತಿದ ನಂತರ ಆಯಾಸವಾಗುತ್ತದೆ. ಕೊಂಚ ನಿಂತುಬಿಡಿ. ಸ್ವಲ್ಪ ಎಡಕ್ಕೆ ತಿರುಗಿದರೆ ನಾಯಿಕೊಡೆಯನ್ನು ಹೋಲುವ ಬಂಡೆಯನ್ನು ಕಂಡು ಅಚ್ಚರಿಯಾದೀತು. ಕೆಲವೊಂದು ವಿನ್ಯಾಸದಲ್ಲಿರುವ ಸಂದುಗಳಲ್ಲಿ ಮತ್ತು ಬಿರುಕುಗಳಲ್ಲಿ ನಡೆದ ಭೌತಿಕ ರಾಸಾಯನಿಕ ಶಿಥಿಲೀಕರಣಗಳ ಫಲವೇ ನೀವು ನೋಡುತ್ತಿರುವ ದೈತ್ಯಾಕಾರದ ಶಿಲಾನಾಯಿಕೊಡೆ. ಈ ಬಗೆಯ ಶಿಲಾನಾಯಿಕೊಡೆಗಳು ಕೋಲಾರ ಜಿಲ್ಲೆಯ ಗಣಚಾರಪುರದಲ್ಲಿಯೂ ಇವೆ. ಆದರೆ ಈ ಅಣಬೆಗಳನ್ನು ನೋಡಿ ಆನಂದಿಸಬೇಕು, ತಿನ್ನಲು ಬರುವುದಿಲ್ಲ.

## ರುಬ್ಬುಗುಂಡು

ಬೆಂಗಳೂರು–ಬಳ್ಳಾರಿಯ ರಸ್ತೆಯ ಪಕ್ಕದಲ್ಲಿರುವ ಮೊಳಕಾಲ್ಮೂರಿನ ಬೆಟ್ಟಗಳು ಹಲವಾರು ಬಗೆಯ ಆಕಾರದ ಬಂಡೆಗಳಿಂದ ಕೂಡಿವೆ. ರಸ್ತೆಯ ಪಕ್ಕದಲ್ಲಿರುವ ಬಂಡೆಯು ಒಂದು ದೊಡ್ಡ ಗೋಳದಂತಿದೆ. ಇದನ್ನು ನೋಡಿದಾಗ ನಾನು ಚಿಕ್ಕಂದಿನಲ್ಲಿ ನಮ್ಮ ತಾಯಿ ನಮ್ಮ ಮನೆಯ ಎಮ್ಮೆ ಮತ್ತು ಆಕಳುಗಳಿಗಾಗಿ ನೆನೆಸಿದ ಹತ್ತಿಯ ಕಾಳನ್ನು ರುಬ್ಬಲು ಉಪಯೋಗಿಸುತ್ತಿದ್ದ ರುಬ್ಬು ಗುಂಡನ್ನು ನೆನೆಸಿಕೊಂಡೆ. ಆದರೆ ಈ ರುಬ್ಬುಗುಂಡನ್ನು ಕೊಂಚ ಅಲುಗಾಡಿಸುವುದಕ್ಕೂ ಹಲವಾರು ಕ್ರೇನುಗಳೇ ಬೇಕಾಗಬಹುದು.

## ಶಿಲಾ ಶಂಖು

ನಾವು ಸಾಮಾನ್ಯ ಶಂಖುವನ್ನು ನೋಡಿದ್ದೇವೆ. ಇದು ಪುರಾತನ ಕಾಲದಲ್ಲಿ ಜೀವಿಸುತ್ತಿದ್ದ ಸಾಗರ ಜೀವಿಗಳ ಗಟ್ಟಿ ಕವಚ. ಇದರೊಳಗಿರುವ ರಂಧ್ರದ ಮೂಲಕ ನಮ್ಮ ಉಸಿರನ್ನು ಊದಿದರೆ ಶಬ್ದ ಹೊರಡುತ್ತದೆ. ಇಂಥ ಶಂಖುವನ್ನೇ ಹೋಲುವ ಬೃಹದಾಕಾರದ ಶಿಲಾಶಂಖುವನ್ನು ನೋಡಲು ಮಾಲೂರು ತಾಲ್ಲೂಕಿನ ಹಳ್ಳಿಗನಹಳ್ಳಿ ಎಂಬ ಹಳ್ಳಿಗೆ ಹೋಗೋಣ ಬನ್ನಿ. ಇಲ್ಲಿ ನೈಸ್ ಜಾತಿಗೆ ಸೇರಿದ ಕಣಶಿಲೆಯ ಬಂಡೆಗಳು ಬಗೆ ಬಗೆಯ ವಸ್ತುಗಳನ್ನು ಹೋಲುತ್ತವೆ. ಇಂಥ ಒಂದು ಬಂಡೆ ಶಂಖುವಿನಾಕಾರದಲ್ಲಿದೆ. ಆದರೆ ಇದನ್ನು ಶಂಖವಾದ್ಯಕ್ಕಾಗಿ ಉಪಯೋಗಿಸಲು ಬರುವುದಿಲ್ಲ. ಯಾರೋ ಬುದ್ಧಿವಂತರು ಈ ಬಂಡೆಯ ಮೇಲೆ ಬಿಳಿ ಬಣ್ಣ ಬಳಿದು ಕರಿಬಣ್ಣದ ಪಟ್ಟಿಗಳನ್ನು ಬಳಿದು ಶಂಖುವಿನ ನಿಜರೂಪ ನೀಡಿದ್ದಾರೆ.

### ಒರಳುಕಲ್ಲಿನ ಕುಣಿಗಳು

ಇಂದಿಗೂ ಬಹುಶಃ ಎಲ್ಲಾ ಅಡಿಗೆಮನೆಗಳಲ್ಲಿ ಇರುವ ವಸ್ತು ಒರಳುಕಲ್ಲು. ಮಸಾಲೆ ಪದಾರ್ಥಗಳನ್ನು ಕುಟ್ಟಲು ಉಪಯೋಗಿಸುವ ಈ ವಸ್ತುವನ್ನು ಒಡ್ಡರು ಜಾಣ ಮತ್ತು ಸುತ್ತಿಗೆಯಿಂದ ಕಟೆಯುತ್ತಾರೆ. ಈ ಬಗೆಯ ಒರಳುಕಲ್ಲಿನ ಕುಣಿಗಳನ್ನು ನದಿಗಳು ವೇಗವಾಗಿ ಹರಿಯುವ ಸ್ಥಳಗಳಲ್ಲಿ ಕಾಣಬಹುದು. ಕಠಿಣ ಶಿಲೆಯಾದ ನೈಸ್ ಕಣಶಿಲೆಯಲ್ಲಿರುವ ತುಲನಾತ್ಮಕವಾಗಿ ಮೃದು ಖನಿಜಗಳನ್ನು, ನದಿಯು ತಾನು ಹೊತ್ತು ತಂದ ಇತರ ಕಠಿಣ ಶಿಲೆಯ ಚೂರುಗಳನ್ನು ಬಾಣದಂತೆ ಉಪಯೋಗಿಸಿ, ಕುಟ್ಟಿ, ಕಟೆದು ಇಂಥ ಕುಣಿಗಳನ್ನು ನಿರ್ಮಿಸುತ್ತದೆ. ಇಂಥ ಕುಣಿಗಳು ಕಾವೇರಿ ನದಿಯ ಮೇಕೆದಾಟುವಿನಲ್ಲಿ ಮಂಗಳೂರು ಬಳಿಯ ಗುರುಪುರ ನದಿಯಲ್ಲಿ, ಭದ್ರಾನದಿ ಪಾತ್ರದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕುದುರೆ ಗುಂಡಿ ಜಲಪಾತ ಎಂಬ ಸ್ಥಳದಲ್ಲಿವೆ. ಇಂಥ ದೊಡ್ಡ ದೊಡ್ಡ ಕುಣಿಗಳಿರುವ ಸ್ಥಳದಲ್ಲಿ ಹರಿವಾಗ ನದಿಯು ಅಪಾಯಕಾರಿಯಾದ ಸುಳಿಗಳನ್ನು ನಿರ್ಮಿಸುತ್ತದೆ. ಆದ್ದರಿಂದ ಇಂಥ ಶಿಲ್ಪಗಳನ್ನು ಬೇಸಗೆಯಲ್ಲಿ ನೋಡಿದರೇನೆ ಕ್ಷೇಮ ಮತ್ತು ಚಂದ.

### ಷಟ್ಕೋನಾಕೃತಿಯ ಸ್ತಂಭಗಳು

ಷಟ್ಕೋನಾಕೃತಿಯ ಸ್ತಂಭಗಳು ನಿಸರ್ಗದಲ್ಲಿ ನಾವು ನೋಡಬಹುದಾದ ಮತ್ತೊಂದು ಕುತೂಹಲಕಾರಿ ಆಕೃತಿ. ಈ ಸುಂದರ ಷಟ್ಕೋನಾಕೃತಿಯ ಸ್ತಂಭಗಳು, ಸಾಮಾನ್ಯವಾಗಿ, ಜ್ವಾಲಾಮುಖಿ ಜನ್ಯ ಶಿಲೆಗಳಾದ ಬೇಸಾಲ್ಟ್ ಶಿಲೆಯಲ್ಲಿ ನೋಡಲು ಸಿಗುತ್ತವೆ. ಜ್ವಾಲಾಮುಖಿಯ ಮೂಲಕ ಹರಿದು ಬರುವ ಅತಿ ಉಷ್ಣದ ಲಾವಾರಸವು (ದ್ರವರೂಪದ ಶಿಲೆ) ಒಮ್ಮಿದೊಮ್ಮೆಲೆ ತಣ್ಣನೆಯ ವಾತಾವರಣವನ್ನು ಸೇರಿದಾಗ **ಲಾವಾರಸ** ತಕ್ಷಣವೇ ತಣ್ಣಗಾಗಲು ಪ್ರಾರಂಭಿಸುತ್ತದೆ. ಆಗ ತಣಪಿನ ಕೇಂದ್ರಗಳು ಲಾವಾರಸದಲ್ಲಿ ಸಮನಾಗಿ ಹಂಚಿ, ಲಾವಾರಸ ತಣ್ಣಗಾಗುತ್ತಾ ಹೋದರೆ ಇಂಥ ಸ್ತಂಭಗಳು ಹುಟ್ಟುತ್ತವೆ. ಈ ಸ್ತಂಭಗಳು ನಮ್ಮ ಮಲ್ಪೆಬಳಿ ಇರುವ ಸೆಂಟ್ ಮೇರಿ ದ್ವೀಪದಲ್ಲಿ ಅತ್ಯುತ್ತಮ ಸ್ಥಿತಿಯಲ್ಲಿವೆ. ನಿಪುಣ ಶಿಲ್ಪಿಯೊಬ್ಬ ಸುಂದರ ದೇವಾಲಯಕ್ಕೆಂದು ಕಟೆದು ನಿಲ್ಲಿಸಿರುವನೋ ಎಂಬ ಭ್ರಮೆ ಹುಟ್ಟಿಸುವಷ್ಟು ಸಮಪ್ರಮಾಣದಲ್ಲಿವೆ ಈ ನೈಸರ್ಗಿಕ ಸ್ತಂಭಗಳು. ನಮ್ಮ ದೇಶದಲ್ಲಿ ಹಿಂದೆ ಇಂಥ ಸ್ತಂಭಗಳು ಅನೇಕ ಕಡೆ ಇದ್ದವು. ಆದರೆ ಅಲ್ಪ ಲಾಭಕ್ಕಾಗಿ ನಮ್ಮ ಕೈಗಳಿಗೆ ಸಿಕ್ಕಿ ನಿರ್ನಾಮವಾಗಿ ಹೋದವು. ಸೃಷ್ಟಿಯ ಚೆಲುವು ನಮ್ಮ ಸುತ್ತಿಗೆಯ ಹೊಡೆತ ಮತ್ತು ಡೈನಮೈಟ್‌ಗಳ ಸಿಡಿತಕ್ಕೆ ಸಿಕ್ಕಿ ನಶಿಸಿಹೋಯಿತು.

### ಡಾಲೋಮೈಟ್ ಶಿಲೆಯ ನೊನಚು ಕಂಬ

ಡಾಲೋಮೈಟ್ ಶಿಲೆಯು ಕ್ಯಾಲ್ಸಿಯಮ್ ಮತ್ತು ಮೆಗ್ನೀಸಿಯಂ ಕಾರ್ಬೋನೀ

ನೇಟ್‌ಗಳ ಸಮ್ಮಿಶ್ರಣದ ಶಿಲೆ. ಕ್ಯಾಲ್ಸಿಯಂ ಕಾರ್ಬೋನೇಟ್ ಸುಲಭವಾಗಿ ನೀರಿನಲ್ಲಿ ಕರಗುತ್ತದೆ. ಇಂಥ ಕರಗುವಿಕೆಯಿಂದಾಗಿ ಉಳಿದ ಮೆಗ್ನೀಸಿಯಂ ಕಾರ್ಬೋನೇಟ್ ನೈಸರ್ಗಿಕ ಕಂಬವಾಗಿ ನಿಲ್ಲುತ್ತದೆ. ಇಲ್ಲಿ ರಾಸಾಯನಿಕ ಶಿಥಿಲೀಕರಣವೇ ಪ್ರಧಾನ. ಯಾಂತ್ರಿಕ ಶಿಥಿಲೀಕರಣ ಗೌಣ. ತುಮಕೂರು ಜಿಲ್ಲೆಯ ಓಬಳಾಪುರ ಎಂಬ ಹಳ್ಳಿಯ ಬಳಿ ಇಂಥ ಕಂಬವೊಂದಿದೆ. ಇದನ್ನು ನೋಡಿದಾಗ ನನಗೆ ದೆಹಲಿಯ ಕುತುಬ್‌ಮಿನಾರ್ ನೆನಪಾಗದಿರಲಿಲ್ಲ.

ನಿಸರ್ಗ ತನ್ನ ಕಾಣದ ಕೈಗಳಿಂದ ಕೋಟ್ಯಾವಧಿ ವರ್ಷಗಳ ಕಾಲ ಕಟೆದು ನಮ್ಮೆದುರು ಹಲವಾರು ಕಡೆ ಈ ಬಗೆಯ ಸುಂದರ ಶಿಲ್ಪಗಳನ್ನು ನಿಲ್ಲಿಸಿದೆ. ಆದರೆ ಇದನ್ನು ಗುರ್ತಿಸುವ ದೃಷ್ಟಿ, ಗುರ್ತಿಸಿ ಆನಂದಿಸುವ ಮನೋಭಾವವನ್ನು ನಾವು ಬೆಳೆಸಿಕೊಳ್ಳಬೇಕು. ಕೊನೆಯಲ್ಲಿ ಒಂದು ಮಾತು ಹೇಳಲೇಬೇಕು. ಇಂಥ ಹಲವಾರು ನೈಸರ್ಗಿಕ ಶಿಲ್ಪಗಳನ್ನು ನಾವು ರಕ್ಷಿಸಬೇಕು. ಕೇವಲ ಕೆಲ ರೂಪಾಯಿಗಳ ಆಸೆಗಾಗಿ ಇಂಥ ನೈಸರ್ಗಿಕ ಶಿಲಾಶಿಲ್ಪಗಳನ್ನು ಹೊಡೆದು ಜಲ್ಲಿಕಲ್ಲುಗಳನ್ನಾಗಿ ಮಾಡುವ ಕಟುಕುತನ ನಮ್ಮಿಂದ ಮಾಯವಾಗಬೇಕು. ಇಲ್ಲವಾದರೆ ಮುಂದಿನ ಜನಾಂಗ ನಮ್ಮನ್ನು ಧನ ಪಿಶಾಚಿಗಳೆಂದು ಶಪಿಸೀತು.

---

"ಸುಖವೆಂದರೆ ಇಂತಹದು ಎಂದು ಹೇಳಲಾಗದಿದ್ದರೂ ಇಂದಿನ ಮನುಷ್ಯ ಸುಖಿಯಾಗಿರಲಾರ ಎಂದು ಮಾತ್ರ ಖಂಡಿತ ಹೇಳಬಹುದು. ಸಂಪ್ರದಾಯದ ಸಂಸ್ಕೃತಿಯನ್ನು ರಕ್ತದಲ್ಲಿರಿಸಿಕೊಂಡು ಹುಟ್ಟಿದ ಆಧುನಿಕನು ಬೆಳೆದಂತೆ ಜಗತ್ತು ತನಗೆ ಪರಿಚಯವಿಲ್ಲದ ಸ್ಥಾನ ಎಂಬ ಅನುಭವವನ್ನು ಪಡೆಯುತ್ತಲಿದ್ದಾನೆ. ಬಾಲ್ಯದಿಂದಲೂ ತಾನು ಕೇಳುತ್ತಿದ್ದ ವರ್ಣನೆಯ ಜಗತ್ತೇ ಬೇರೆ. ಈಗ ತನ್ನನ್ನು ಎದುರಿಸುವ ಜಗತ್ತೇ ಬೇರೆ ಎಂಬುದಕ್ಕಾಗಿ ಇಡಿಯ ಜನ್ಮವನ್ನು ಭ್ರಾಂತನಂತೆಯೇ ಕಳೆಯಬೇಕಾಗಿದೆ. ಇಂದಿನ ಮನುಷ್ಯ ಹೆಚ್ಚು ಸುಶಿಕ್ಷಿತ ಎಂದು ಹೇಳುತ್ತ ಬೆಳೆದವನು. ತಾನು ಆ ಶಿಕ್ಷಣವನ್ನು ಪಡೆದು ಅದರಿಂದ ತನಗೆ ಸಮಾಧಾನವೂ ಇಲ್ಲ, ಪ್ರಯೋಜನವೂ ಇಲ್ಲ ಎಂದು ಕಂಡುಕೊಳ್ಳುತ್ತಾನೆ. ಒಮ್ಮೊಮ್ಮೆ ತನ್ನದು 'ಉದರ ವೈರಾಗ್ಯದ ಜ್ಞಾನ' ನಿಜವಾದ ಜ್ಞಾನವಲ್ಲ ಎಂಬುದು ತಿಳಿದು ಹೆಚ್ಚೆಚ್ಚು ಬೆಳೆದಂತೆ ಹೆಚ್ಚೆಚ್ಚು ಅಸ್ವಸ್ಥನಾಗುತ್ತಾನೆ...ತನಗೆ ದಿನ ನಿತ್ಯಜೀವನದಲ್ಲಿ ಹಿಂದಿನವರಿಗಿಲ್ಲದ ಅನೇಕ ಅನುಕೂಲತೆಗಳೂ ಸೌಲಭ್ಯಗಳೂ ಇವೆ ಎಂದು ಬೀಗಿಕೊಳ್ಳುವಾಗ ಎಲ್ಲಿಯೊ ಮುಷ್ಕರವಾದಲ್ಲಿ, ಎಲ್ಲಿಯೊ ಯುದ್ಧವಾದಲ್ಲಿ ಆ ಎಲ್ಲ ಅನುಕೂಲತೆಗಳು ನಿರುಪಾಯವಾಗಿ ಮಾಯವಾಗುವುದನ್ನು ಕಂಡು ತನ್ನಂಥ ಅಸಹಾಯ ಬಡಜೀವಿ ಇನ್ನೊಬ್ಬನಿಲ್ಲ ಎಂದು ನೊಂದುಕೊಳ್ಳುತ್ತಾನೆ."

ಶ್ರೀರಂಗ

'ಮಾನವನ ಮೃತ್ಯುಪತ್ರ'

# ಥಾರಸ್ಟೈನ್ ವೆಬ್ಲನ್ ಮತ್ತು ವಿರಾಮ ವರ್ಗ

ಡಾ|| ಎಂ. ಎಸ್. ವಿಘ್ನೇಶ

ಥಾರಸ್ಟೈನ್ ವೆಬ್ಲನ್ (1857–1929) ಅಮೆರಿಕಾದ ಸಮಾಜಶಾಸ್ತ್ರಜ್ಞರಲ್ಲಿ ಪ್ರಮುಖ. ಇವನು ಊಳಿಗಮಾನ್ಯ ವ್ಯವಸ್ಥೆಯನ್ನು ಮುಂದುವರಿಸುವ, ತನ್ಮೂಲಕ ಯಜಮಾನ ಸಂಸ್ಕೃತಿಯ ಸಿದ್ಧಾಂತ, ಆದರ್ಶ ಹಾಗೂ ಚಿಂತನೆಯನ್ನೇ ಪ್ರಮುಖ ವಸ್ತುವಾಗಿರಿಸಿದ, ಸಂಪ್ರದಾಯಬದ್ಧ ಸಮಾಜಶಾಸ್ತ್ರಜ್ಞರಿಗಿಂತ ಭಿನ್ನವಾಗಿದ್ದ. ಇವನ ಚಿಂತನೆ, ಸಿದ್ಧಾಂತ ಮತ್ತು ಜೀವನ ಕ್ರಮಗಳಲ್ಲಿ ವಾಸ್ತವಿಕ ವರ್ಗಸಂಘರ್ಷಣಾ ಮನೋಭಾವವನ್ನು ಕಾಣಬಹುದು. ಇವರ ಪ್ರಕಾರ ಸಮಾಜ ವರ್ಗಪ್ರಧಾನ ನೆಲೆಯ ಮೇಲೆ ನಿಂತಿರುವ ಕ್ರಿಯೆ-ಪ್ರಕ್ರಿಯೆಗಳ ಸಮೂಹ. ಇದರ ಪರೋಕ್ಷ ಕೇಂದ್ರ ಬಿಂದು 'ವಿರಾಮ ವರ್ಗ'. ವೆಬ್ಲನ್ನನ ವಿರಾಮ ವರ್ಗದ ವಿಶ್ಲೇಷಣೆಯು ವಿಡಂಬನಾತ್ಮಕವಾಗಿ ಕಂಡರೂ ಸಾಮಾಜಿಕ ವಸ್ತು ಸ್ಥಿತಿಯನ್ನು ಎತ್ತಿಹಿಡಿಯುವುದರಲ್ಲಿ ಗಮನಾರ್ಹ ಯಶಸ್ಸು ಸಾಧಿಸಿತು.

ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಪೈಪೋಟಿ ಪ್ರಧಾನ ಸಮಾಜ ನಿರ್ಮಾಣವಾಯಿತು. ವ್ಯಕ್ತಿ ವ್ಯಕ್ತಿಗಳ ಸಂಬಂಧಕ್ಕಿಂತಲೂ ವ್ಯಕ್ತಿ ಹಾಗೂ ವಸ್ತುಪ್ರಧಾನ ವ್ಯವಸ್ಥೆಯ ಸಂಬಂಧ ಪ್ರಮುಖವಾಯಿತು. ಈ ರೀತಿಯ ಪೈಪೋಟಿ ಪ್ರಧಾನ ಸಮಾಜದಲ್ಲಿ ವ್ಯಕ್ತಿಗಳು ತಮ್ಮ ಕ್ರಿಯಾ ಸಾಮರ್ಥ್ಯವನ್ನು ಬೇರೆಯವರ ಸಾಮರ್ಥ್ಯದೊಡನೆ ಹೋಲಿಸುವುದರ ಮೂಲಕ ತಮ್ಮ ವರ್ಗವನ್ನು ನಿಗದಿಗೊಳಿಸುತ್ತಾರೆ. ಈ ವ್ಯವಸ್ಥೆಯಲ್ಲಿ ವ್ಯಕ್ತಿಗಳು ತಮ್ಮ ಸಹಪಾಠಿಗಳನ್ನು ಮೀರಿಸುವ, ಮೇಲು ವರ್ಗದೊಡನೆ ತಮ್ಮ ಅಸ್ತಿತ್ವವನ್ನು ಸಿಂಧುಮಾಡುವ ಪ್ರಯತ್ನದಲ್ಲಿ ತೊಡಗಿರುತ್ತಾರೆ. ಇದು ಸಂಪೂರ್ಣವಾಗಿ ಭೌತಿಕ ಪ್ರಧಾನ ಸಮಾಜ.

ವೆಬ್ಲನ್ನನ ಸಿದ್ಧಾಂತವನ್ನು ಎರಡು ರೀತಿಯಲ್ಲಿ ವಿಮರ್ಶಿಸಬಹುದು. ವ್ಯಕ್ತಿ ಮನೋಭಾವ ಹಾಗೂ ಆಂತರ್ಯೀಕರಣ ಕ್ರಿಯೆ ಮತ್ತು ಸಾಮಾಜಿಕ ವರ್ಗಗಳ ರಚನೆ. ವ್ಯಕ್ತಿಯನ್ನೇ ಪ್ರಧಾನವಾಗಿಟ್ಟುಕೊಂಡು ಸಾಮಾಜಿಕ ಕ್ರಿಯೆ ಮತ್ತು ಬೆಳವಣಿಗೆಯನ್ನು ಪಾರದರ್ಶಕ ಭಾಷೆಯಲ್ಲಿ ವಿಶ್ಲೇಷಿಸಿದ ಸಾಹಸ ವೆಬ್ಲನ್ನನದು. ಅವನ ಪ್ರಕಾರ ವರ್ಗಗಳ ಅಸಮಾನತೆ ಭೌತಿಕ ಹಂದರದ ಮೇಲೆ ನಿರೂಪಿಸಲ್ಪಡುತ್ತದೆಯೇ ವಿನಃ ತಾತ್ವಿಕ ಬುನಾದಿಯ ಮೇಲಲ್ಲ. ಇಲ್ಲಿ ವೆಬ್ಲನ್ ಕಾರ್ಲ್‌ಮಾರ್ಕ್ಸ್‌ನಿಗಿಂತಲೂ ಭಿನ್ನ. ಮಾರ್ಕ್ಸ್ ವರ್ಗಸಂಘರ್ಷವನ್ನು ಸಾಮಾಜಿಕ–ಆರ್ಥಿಕ ತಳಹದಿಯ ಮೇಲೆ ನಿಲ್ಲಿಸಿದರೆ ವೆಬ್ಲನ್ ಮನೋ-ಸಾಮಾಜಿಕ ನೆಲೆಯಲ್ಲಿ ನಿಲ್ಲಿಸುತ್ತಾನೆ.

ವಿರಾಮ ವರ್ಗದವರು ಬೆಳೆಸಿ ಪೋಷಿಸಿರುವ ಆಚಾರ ಮತ್ತು ಜೀವನ ವಿಧಾನ ಗಳು ಅವರ ವಿಶ್ರಾಂತಿ ಮತ್ತು ಅನುಭೋಗಗಳ ಮಟ್ಟವನ್ನು ಅವಲಂಬಿಸಿರುತ್ತವೆ. ತಮ್ಮ ಐಷಾರಾಮ ಜೀವನ ಮೌಲ್ಯದಿಂದ ಮಧ್ಯಮ ಮತ್ತು ಕೆಳವರ್ಗದವರಲ್ಲಿ ಕೀಳರಿಮೆಯನ್ನು ಹರಡಿ ತಮ್ಮ ಭೌತಿಕ ಪ್ರಧಾನ ಜೀವನ ಕ್ರಮಕ್ಕೂ, ಉಳಿದ ವರ್ಗಕ್ಕೂ ಅಂತರ ಸೃಷ್ಟಿಸುತ್ತಾರೆ.

ಈ ಸಮಾಜಶಾಸ್ತ್ರಜ್ಞ ಮಾರ್ಕ್ಸ್‌ನಿಗಿಂತ ಬೇರೆಯಾಗಿ ಇತಿಹಾಸವನ್ನು ಅವಲೋಕಿಸಿದ. ಅವನ ಪ್ರಕಾರ ವಿರಾಮ ವರ್ಗವು ಸಾಮಾಜಿಕ ಮಾಧ್ಯಮಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡು ವ್ಯವಸ್ಥಿತವಾಗಿ ಉಪಯೋಗಿಸಿಕೊಳ್ಳುತ್ತದೆ. ಹೀಗೆ ತಮ್ಮ ಸಮಾಜದ ಉತ್ಸಾರಿಯ ಕೇಂದ್ರ ಬಿಂದುವಾಗಿ ಐತಿಹಾಸಿಕ ಪ್ರಾಮುಖ್ಯತೆ ಪಡೆಯುತ್ತದೆ. ಈ ವರ್ಗ 'ಐಷಾರಾಮ ನಿರ್ಲಿಪ್ತ' ವರ್ಗವಾಗಿ ತೋರಿದರೂ ಆಂತರ್ಯದಲ್ಲಿ 'ಪ್ರಖ್ಯಾತಿ ತತ್ವ'ಕ್ಕೆ (Principle of popularity) ಬದ್ಧವಾಗಿ ಸಮಾಜದ ಸಮಗ್ರ ರಚನಾಯಂತ್ರವನ್ನು ತಮ್ಮ ಹಿಡಿತದಲ್ಲಿಟ್ಟು ತನ್ಮೂಲಕ ಯಜಮಾನ ಸಂಸ್ಕೃತಿಯನ್ನು ಭದ್ರಗೊಳಿಸುತ್ತಲೇ ಹೋಗುತ್ತದೆ. ಸೂಕ್ಷ್ಮ ಹಂದರದಲ್ಲಿ ವೆಬ್ಲನ್ ವಿರಾಮ ವರ್ಗದ ಅಸ್ಥಿರತಾ ಮನೋಭಾವವನ್ನು ಮಾರ್ಮಿಕವಾಗಿ ವರ್ಣಿಸುತ್ತಾನೆ. ಈ ವರ್ಗ ಸಂಖ್ಯೆಯಲ್ಲಿ ಗಣನೀಯವಾಗಿ ಕಡಿಮೆಯಿದ್ದು, ಯಾವಾಗಲಾದರೂ ಮಧ್ಯಮ ಮತ್ತು ಕೆಳವರ್ಗ ಬಂಡಾಯ ಹೂಡುವ ಸಂಭವ ಇರುತ್ತದೆ. ಈ ಸುಪ್ತ ಅಂಜಿಕೆಗೆ ಒಳಗಾದ ವಿರಾಮ ವರ್ಗ ತಾವೇ ರೂಢಿಸಿಕೊಂಡ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಮೌಲ್ಯಗಳೇ ಶ್ರೇಷ್ಠ ಎನ್ನುವ ಮನೋಭಾವವನ್ನು ಉಳಿದೆರಡು ವರ್ಗಗಳಲ್ಲಿ ಬೇರೂರಿಸುವ ಕ್ರಿಯೆ ಯಲ್ಲಿ ನಿರಂತರವಾಗಿ ತೊಡಗುತ್ತದೆ.

ಇವನ 'ಪ್ರಖ್ಯಾತಿ ತತ್ವ'ವು ಪ್ರತಿಯೊಂದು ವಿಶಿಷ್ಟ ವರ್ಗದ ಆರ್ಥಿಕ ಮತ್ತು ಸಾಂಪ್ರದಾಯಿಕ ಮೌಲ್ಯಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಪ್ರಖ್ಯಾತಿ ನಿಯಮವು ವಿಶ್ರಾಂತಿ ವರ್ಗದಲ್ಲಿ ತನ್ನ ನೆಲೆಯನ್ನು ಹೊಂದಿದ್ದರೂ ಅದು ಒಟ್ಟು ಸಂಸ್ಕೃತಿಯ ನಿಜ ಸ್ವರೂಪವನ್ನು ಸೂಚಿಸಿ ವಿಶಿಷ್ಟ ಜೀವನ ವಿಧಾನವನ್ನು ರೂಪಿಸು ತ್ತದೆ. ಮಾರ್ಕ್ಸ್ ತನ್ನ ಪ್ರಖ್ಯಾತಿ ತತ್ವವನ್ನು ಕೇವಲ ಬಂಡವಾಳಶಾಹಿ ವರ್ಗಕ್ಕೆ ಮೀಸಲಾಗಿರಿಸಿದರೆ ವೆಬ್ಲನ್ ಇದನ್ನು ಸಾರ್ವತ್ರಿಕ ಕ್ರಿಯೆಯಾಗಿ ಬಳಸುತ್ತಾನೆ. ಇವನ ವಿರಾಮ ವರ್ಗದ ಸಿದ್ಧಾಂತವನ್ನು ಸ್ಥೂಲವಾಗಿ ಈ ಕೆಳ ಕಂಡಂತೆ ವಿಶ್ಲೇಷಿಸ ಬಹುದು.

ತಾಂತ್ರಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಒಬ್ಬ ವ್ಯಕ್ತಿಯು ಹೊಂದಿರುವ ಸ್ಥಾನವು ಅವನ ಮನೋಭಾವ ಮತ್ತು ಆಲೋಚನಾ ವಿಧಾನಗಳನ್ನು ರೂಪಿಸುತ್ತದೆ. ಇದೇ ರೀತಿಯಲ್ಲಿ ವ್ಯಕ್ತಿಗಳು ತಮ್ಮ ಜೀವನೋಪಾಯಗಳನ್ನು ಉತ್ತಮಪಡಿಸಲು ಪ್ರಕೃತಿಯೊಡನೆ ನಿರಂತರ ಹೋರಾಟದಲ್ಲಿ ತೊಡಗುತ್ತಾರೆ. ಪರಿಣಾಮವಾಗಿ ಅವರ

ಕಟ್ಟುಪಾಡು, ನಡೆ, ನುಡಿ, ಕ್ರಿಯಾವಿಧಾನ ಸಮುದಾಯದಲ್ಲಿ ಬೆಳೆಯುತ್ತದೆ. ಇವು ಕಾಲಕ್ರಮೇಣ ವ್ಯವಸ್ಥಿತ ರೂಪತಾಳಿ ವ್ಯಕ್ತಿಗಳ ಮೇಲೆ ಹಿಡಿತ ಸ್ಥಾಪಿಸಿ ಕೊಳ್ಳುತ್ತವೆ. ಸಂಸ್ಥೆಗಳು ಅಭ್ಯಾಸ ಮತ್ತು ಕಟ್ಟುಪಾಡುಗಳ ಒಕ್ಕೂಟವಾಗಿದ್ದು ಸಮುದಾಯದ ಮನ್ನಣೆ ಪಡೆಯುತ್ತದೆ.

ಆರಾಮು ವರ್ಗವು (ಹಣಸಂಪಾದಿಸುವ ಕಾರ್ಯಗಳಲ್ಲಿ ಭಾಗವಹಿಸುವ ವರ್ಗ) ಸಮಾಜದ ವಿಕಸನೀಯ ಬೆಳವಣಿಗೆಯ ಕಾರ್ಯಭಾರಿಗಳಾಗಿರದೆ ಯಂತ್ರ ನಾಯಕತ್ವದ ಮತ್ತು ಬೇರೆಯವರು ಸಂಶೋಧಿಸಿದ ನವೀನತೆಯ ಮೇಲೆ ಅವಲಂಬಿತವಾಗಿರುವ ಪರತಂತ್ರ ಜೀವಿಗಳು. ಈ ವರ್ಗ ಕೈಗಾರಿಕಾ ಸಮುದಾಯಕ (ಕಾರ್ಮಿಕರ) ಹಾಸು ಹೊಕ್ಕಾಗಿರದೆ ಅವರ ಮೂಲಕ ಜೀವನ ಸಾಗಿಸುತ್ತದೆ. ತಮ್ಮ ಈ ಕ್ರಿಯೆಗೆ ಪೂರಕವಾಗಿ ಸಿದ್ಧಾಂತ, ಮೌಲ್ಯ ಹಾಗೂ ಕಟ್ಟುಪಾಡುಗಳನ್ನು ರೂಪಿಸುತ್ತದೆ. ಈ ಕ್ರಿಯೆಗೆ ಧಾರ್ಮಿಕ ಮತ್ತು ರಾಜಕೀಯ ಶಕ್ತಿಗಳನ್ನು ಪರೋಕ್ಷದಲ್ಲಿ ಪರಿಣಾಮ ಕಾರಿಯಾಗಿ ಬಳಸಲ್ಪಡುತ್ತದೆ. ಮೇಲಾಗಿ ವೈಜ್ಞಾನಿಕ ಮತ್ತು ತಾಂತ್ರಿಕ ಸಾಧನೆಗಳನ್ನು ತಮ್ಮ ನಂಬಿಕೆಗಳ ಪ್ರಸರಣಕ್ಕೆ ಉಪಯೋಗಿಸಿಕೊಳ್ಳಲಾಗುತ್ತದೆ.

ಆರಾಮುವರ್ಗದ ವ್ಯವಸ್ಥಾತ್ಮಕ ಶೋಷಣೆ ಮಿತಿ ಮೀರಿದಾಗ ಶೋಷಿತವರ್ಗ ಘರ್ಷಣಾ ಮಾರ್ಗಕ್ಕೆ ಇಳಿಯುವ ಸಾಧ್ಯತೆ ಇದೆ. ಈ ಹಂತ ಪರಂಪರಾಗತ ವ್ಯವಸ್ಥೆ ಮತ್ತು ನವ್ಯ ವ್ಯವಸ್ಥೆಯ ನಡುವಿನ ಪರಿವರ್ತನಸ್ಥಿತಿ. ವೆಬ್ಲನ್ ಮಾರ್ಕ್ಸ್‌ನಂತೆ ವರ್ಗಕಲಹವನ್ನು ಇತಿಹಾಸದ ಚಾಲಕವನ್ನಾಗಿ ಪರಿವರ್ತಿಸಲಿಲ್ಲ. ಈ ಘರ್ಷಣೆ ಇತಿಹಾಸವನ್ನೇ ರೂಪಿಸುವ ಶಕ್ತಿ ಎಂದು ಅವನ ಅಭಿಮತ. ಘರ್ಷಣೆ ಉಗ್ರರೂಪ ತಾಳಿದಾಗ ಪಟ್ಟಭದ್ರ ಹಿತಾಸಕ್ತಿಗಳನ್ನು ಹೊಂದಿರುವ ಆರಾಮುವರ್ಗ ಮತ್ತು ಕಾರ್ಮಿಕ ವರ್ಗಗಳ ನಡವೆ ದ್ವೇಷ ಬಿಗಡಾಯಿಸಿ ವ್ಯವಸ್ಥಾತ್ಮಕ ಸಾಮಾಜಿಕ ಮೌಲ್ಯಗಳ ಕುಸಿತ ಪ್ರಾರಂಭವಾಗುತ್ತದೆ. ಈ ಸಂಕ್ರಮಣ ಕಾಲದಲ್ಲಿ ಮಧ್ಯಮ ವರ್ಗದವರು ಇತ್ತ ಆರಾಮು ವರ್ಗದವರನ್ನು ಅವಲಂಬಿಸದೆ ಅತ್ತ ಕಾರ್ಮಿಕರತ್ತಲೂ ಒಲಿಯದೆ ಒಂದು ರೀತಿಯ ತ್ರಿಶಂಕು ಸ್ಥಿತಿಯಲ್ಲಿದ್ದು ಪರಿಸ್ಥಿಯ ಪ್ರೇಕ್ಷಕರಾಗಷ್ಟೇ ಉಳಿಯುತ್ತಾರೆ.

ವೆಬ್ಲನ್ ತನ್ನ ಸಿದ್ಧಾಂತದಲ್ಲಿ ತನ್ನ ಕಾಲದ ಅಮೇರಿಕಾ ಸಾಹಿತ್ಯವನ್ನು ಮೌಲ್ಯಾಧಾರಿತ ಚೌಕಟ್ಟಿನಲ್ಲಿ ಟೀಕಿಸಿದ. ಇವನ ಪ್ರಕಾರ ಸಾಹಿತ್ಯ ಆರಾಮುವರ್ಗದ ನಿರ್ದೇಶನದಲ್ಲಿ ವಾಸ್ತವಿಕ ಸ್ಥಿತಿಯನ್ನೇ ಭದ್ರಗೊಳಿಸುವ ಅಸ್ತ್ರವಾಗಷ್ಟೇ ಉಳಿಯುತ್ತದೆ. ಪರಂಪರಾಗತವಾಗಿ ಬಂದ ಊಳಿಗಮಾನ್ಯ ಪದ್ಧತಿಯ ಪ್ರತಿನಿಧಿಗಳಾಗಿ ಆರಾಮುವರ್ಗದ ಕೈಗೊಂಬೆಯಾಗಿ ಬುದ್ಧಿಜೀವಿಗಳು (Elite) ತಮ್ಮ ಸಾಹಿತ್ಯಾಸಕ್ತಿಯನ್ನು ಬೆಳೆಸಿಕೊಳ್ಳುತ್ತಾರೆ. ಇವರು ಕಾರ್ಮಿಕ ವರ್ಗದವರಲ್ಲಿ ಪರಂಪರಾಗತ ಮೌಲ್ಯವನ್ನು ಆಂತರ್ಯೀಕರಿಸಲು ವ್ಯವಸ್ಥಾತ್ಮಕ ಪ್ರಯತ್ನ ನಡೆಸುತ್ತಾರೆ.

ಔದ್ಯೋಗೀಕರಣ ಸಮಾಜದಲ್ಲಿ ದುಂದುವೆಚ್ಚದ (Conspecuous Consum

ption) ಜೀವನ ವಿಧಾನ ಎಲ್ಲ ವರ್ಗದಲ್ಲಿಯೂ ಒಂದಲ್ಲಾ ಒಂದು ರೀತಿಯಲ್ಲಿ ಹರಡಿಕೊಳ್ಳುತ್ತದೆ. ಇದು ಒಂದು ರೀತಿಯ ಅನುಕರಣೆ. ಈ ಘಟ್ಟದಲ್ಲಿ ಮಾರ್ಕ್ಸ್‌ನ ಇತಿಹಾಸದ ಭೌತಿಕ ನಿರೂಪಣೆ ಅರ್ಥ ಕಳೆದುಕೊಳ್ಳುತ್ತದೆ. ಊಳಿಗಮಾನ್ಯ ಪದ್ಧತಿಯಲ್ಲಿ ದುಂದುವೆಚ್ಚದ ಜೀವನ ಕ್ರಮ ಕೇವಲ ಆರಾಮುವರ್ಗಕ್ಕೆ ಸೀಮಿತ ವಾಗಿತ್ತು. ಆದರೆ ಸಮಕಾಲೀನ ಸಮಾಜದಲ್ಲಿ ಪ್ರತಿಯೊಂದು ವರ್ಗವೂ ತನ್ನ ಶಕ್ತ್ಯಾನುಸಾರ, ಮೇಲಿನ ವರ್ಗದ ಜೀವನ ವಿಧಾನವನ್ನು ಅನುಕರಿಸಲು ಪ್ರಾರಂಭಿ ಸುತ್ತವೆ. ಪರಿಣಾಮವಾಗಿ ಪ್ರತಿಯೊಂದು ಸಾಮಾಜಿಕ ವರ್ಗವೂ ಯಥಾಸ್ಥಿತಿಯನ್ನು ಒಪ್ಪಿಕೊಳ್ಳದೆ ತಮ್ಮ ಜೀವನದ ಆದರ್ಶವಾಗಿ ತಮಗಿಂತ ಮೇಲಿನ ವರ್ಗದ ಜೀವನ ವಿಧಾನವನ್ನು ಒಪ್ಪಿಕೊಂಡು ಅವರ ಸ್ಥಿತಿಗೆ ಬದ್ಧವಾಗಿ ತಮ್ಮತನವನ್ನು ಕಳೆದು ಕೊಂಡು ಬಿಡುತ್ತಾರೆ. ಈ ಅನುಕರಣ ಪದ್ಧತಿಯಿಂದ ಕ್ರಾಂತಿಯ ಸಂಭವ ಮತ್ತು ವರ್ಗ ಸಂಘರ್ಷ ಕಡಿಮೆಯಾಗುತ್ತದೆ. ಕೆಳವರ್ಗದವರು ಮಧ್ಯಮ ವರ್ಗದವರನ್ನು, ಮಧ್ಯಮ ವರ್ಗದವರು ಮೇಲು ವರ್ಗದವರನ್ನೂ ಅನುಕರಿಸುವ ಕ್ರಿಯೆ ಸಾಮಾಜಿಕ-ಮಾನಸಿಕ ಸತ್ಯ ಮತ್ತು ನಿರಂತರ. ಗಮನ ಸೆಳೆಯುವ ಅನುಭೋಗ, ಮನರಂಜನೆ ಮತ್ತು ಉನ್ನತಮಟ್ಟ ಸೂಚಿಸುವ ಚಿನ್ಹೆಗಳು ತಮ್ಮ ನೆರೆಹೊರೆಯವರನ್ನೂ (ವರ್ಗ) ಮೀರಿಸಲು, ತನ್ಮೂಲಕ ಪ್ರತಿಷ್ಟೆಗಳಿಸಿಕೊಳ್ಳಲು ವ್ಯಕ್ತಿಗಳು ಉಪಯೋಗಿಸುವ ಸಾಧನಗಳಾಗಿರುತ್ತವೆ. ಈ ಕ್ರಿಯೆ ಆಯಾ ಸಮಾಜದ ಆರಾಮುವರ್ಗದವರ ಸ್ಥಿತಿ ಗತಿಯನ್ನವಲಂಬಿಸಿರುತ್ತದೆ.

ವೆಬ್ಲನ್ ತನ್ನ ಸಮಾಜ ಶಾಸ್ತ್ರೀಯ ವಿಶ್ಲೇಷಣೆಯಲ್ಲಿ ಸಾಮಾಜಿಕ ಕ್ರಿಯೆ ಯಲ್ಲಿ ಭಾಗವಹಿಸುವ ವ್ಯಕ್ತಿಗಳ ವಿಚಾರ ಧೋರಣೆಗಳನ್ನು, ಅವರ ನಡತೆಯ ರೀತಿ, ನೀತಿ, ರಿವಾಜುಗಳನ್ನು ನಿರ್ಧರಿಸುವ ಪೈಪೋಟಿಯುತ ಸಂಬಂಧಗಳ ವಿವರಣೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದು ಕಂಡುಬರುತ್ತದೆ. ಈತ ಮಾನವನ ದೈನಂದಿನ ಬದುಕಿನಲ್ಲಿ ಕಂಡುಬರುವ ಪೈಪೋಟಿ ಪ್ರಧಾನ ಸಮಾಜಿಕ ಮೌಲ್ಯಗಳ ಅನುಭವಾತ್ಮಕ ಸಿದ್ಧಾಂತವನ್ನು ಪ್ರತಿಪಾದಿಸಿದ. ಅವನ ಪ್ರಕಾರ ಒಬ್ಬ ವ್ಯಕ್ತಿಯ ಸ್ಥಾನಮಾನವು ಅವನ ಸಹವರ್ತಿಗಳು ನೀಡುವ ಗೌರವದ ಪ್ರತಿಬಿಂಬ. ಪೈಪೋಟಿಯಲ್ಲಿ ವಿಫಲವಾದ ವರ್ಗ ತನ್ನ ಸ್ವಪ್ರತಿಷ್ಟೆ ಕಳೆದುಕೊಂಡು ಮನೋವೇದನೆ ಅನುಭವಿಸುತ್ತದೆ. ಆತ್ಮ ಪ್ರತಿಷ್ಟೆ ಕಳೆದುಕೊಳ್ಳುವ ಭಯವು ಸಾಮಾನ್ಯವಾಗಿ ಪೈಪೋಟಿಯುತ ಜೀವನಕ್ಕೆ ಪ್ರಾಧಾನ್ಯತೆ ದೊರಕಿರುವ ಎಲ್ಲ ಸಮಾಜಗಳಲ್ಲಿಯೂ ಕಂಡುಬರುತ್ತದೆ. ಈ ರೀತಿಯ 'ವಿಫಲ ವರ್ಗ' ಕ್ರಾಂತಿಯ ಹರಿಕಾರವಾಗುವ ಸಾಧ್ಯತೆ ಇದೆ. ಕ್ರಾಂತಿಯಾದಾಗ ವಿಫಲವರ್ಗ (ಕೆಳವರ್ಗ) ಸಮಾಜವನ್ನು ತನ್ನ ಹತೋಟಿಗೆ ತೆಗೆದುಕೊಳ್ಳುತ್ತದೆ. ಕ್ರಮೇಣ ಇವರಲ್ಲೇ 'ಆರಾಮುವರ್ಗ'ದ ಸೃಷ್ಟಿಯಾಗಿ ಮೂಲ ವ್ಯವಸ್ಥೆಗೆ ಸಮಾಜ ತಿರುಗಿ ಬಿಡುವುದು ಒಂದು ವಿಪರ್ಯಾಸ–ಇದು ವೆಬ್ಲನ್‌ನ ಅಭಿಮತ.

# ಪರಿಸರದ ಅವನತಿ-ನಾವೆಷ್ಟು ಬೆಲೆ ತೆರಬೇಕಾದೀತು

ಡಾ|| ಮಾಧವ ಗಾಡಗೀಳ

ಪರಿಸರ ಸಂರಕ್ಷಣಾ ಯೋಜನೆ, ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರವು ನಿರ್ವಹಿಸಲಾರದಂಥ ಬಿಳಿಯಾನೆ ಎಂದು ಹಲವರು ಒತ್ತಿ ಹೇಳುತ್ತಿದ್ದಂಥ ಕಾಲ ಒಂದಿತ್ತು. ನಮಗೆ ಈಗ ಹೆಚ್ಚು ಹೆಚ್ಚಾಗಿ ಬೇಕಾಗಿರುವುದು ಆಣೆಕಟ್ಟುಗಳು, ಉಕ್ಕು, ಕೀಟನಾಶಕ, ರಸಗೊಬ್ಬರಗಳ ಕಾರ್ಖಾನೆಗಳು ಎಂಬುದು ಅವರ ವಾದವಾಗಿತ್ತು. ಈ ಕಾರ್ಯದಲ್ಲಿ ಘಟ್ಟಗಳ ಕಾಡುಗಳು ನಾಶವಾದರೆ, ನದಿಗಳು ಕಲುಷಿತವಾದರೆ, ವನ್ಯಪಶುಗಳು ಹತವಾದರೆ ಅದು ಅವರ ದೃಷ್ಟಿಯಲ್ಲಿ ಖಂಡಿತವಾಗಿಯೂ ಕ್ಷಮ್ಯವೆನಿಸುತ್ತಿತ್ತು. ಆದರೆ ಪರಿಸರ ವಿಷಯುಕ್ತವಾದುದರ ಪರಿಣಾಮವಾಗಿ ಸಾವಿರಾರು ಜನ ಅಸುನೀಗಿದ ಇತ್ತೀಚಿನ ಭೋಪಾಲ ದುರಂತದ ಬಗ್ಗೆ ಕಂಡು ಕೇಳಿದ ನಂತರವೂ ಇಂಥ ಅಭಿಪ್ರಾಯವನ್ನೇ ಹೊಂದಿರುವ ಜನ ಇರುವರಾದರೆ ಅಂಥವರ ಸಂಖ್ಯೆ ತೀರ ವಿರಳ. ಹೀಗಾಗಿ ಪರಿಸರವನ್ನು ಸಂರಕ್ಷಿಸುವ ತುರ್ತು ಅಗತ್ಯದ ಬಗ್ಗೆ ಏಕಾಭಿಪ್ರಾಯದ ಕಳಕಳಿಯ ಕೂಗು ಕೇಳಿ ಬರುತ್ತಿದೆ.

ಇದೊಂದು ಸ್ವಾಗತಾರ್ಹ ಬೆಳವಣಿಗೆ. ಏಕೆಂದರೆ ದೇಶದ ಅಭಿವೃದ್ಧಿಯ ಸತ್ಫಲಗಳನ್ನು ಮೀರಿಸುವಷ್ಟು ಭೂತಾಕಾರವಾಗಿ ಪರಿಸರ ಅವನತಿಯ ದುಷ್ಪರಿಣಾಮಗಳು ಬೆಳೆದು ಬಿಟ್ಟಿವೆ. ಅರ್ಥಶಾಸ್ತ್ರಜ್ಞ ಶ್ರೀ ವಿಜಯ ಪರಾಂಜಪೆಯವರು ಪುಣೆಯ ಬಳಿ ಇರುವ ಪಾವನ ಆಣೆಕಟ್ಟಿನ ನದೀ ಕಣಿವೆ ಯೋಜನೆಯ ಬಗ್ಗೆ ನಡೆಸಿದ ಅಧ್ಯಯನವು ಇದನ್ನು ಚೆನ್ನಾಗಿ ಸ್ಪಷ್ಟಪಡಿಸುತ್ತದೆ.

ಆಣೆಕಟ್ಟಿನಂಥ ಪ್ರಮುಖ ಯೋಜನೆಯೊಂದರ ಬಗ್ಗೆ ದೀರ್ಘ ಅಧ್ಯಯನವನ್ನು ನಡೆಸಿದಾಗ ಯೋಜನೆಯ ಬಗ್ಗೆ ವಿವರವಾದ ವರದಿಯನ್ನು ಸಿದ್ಧಪಡಿಸಲಾಗುತ್ತದೆ. ಇಂಥ ಅಧ್ಯಯನವು, ಯೋಜನೆಗೆ ತಗಲಲಿರುವ ವೆಚ್ಚಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಆ ಯೋಜನೆಯಿಂದ ಪಡೆಯಬಹುದಾದ ಲಾಭಗಳನ್ನು ಗುಣಿಸುತ್ತದೆ. ಹೀಗೆ ಒಂದು ನೀರಾವರಿ ಯೋಜನೆಯ ವಿಷಯದಲ್ಲಿ ಲಾಭಗಳು ಎಂದರೆ ಅದರಲ್ಲಿ, ನೀರಾವರಿ ಸೌಲಭ್ಯವನ್ನು ಪಡೆದಿರುವ ಕೃಷಿಭೂಮಿಯ ಸಂಭವನೀಯ ಉತ್ಪಾದನೆ, ಆಣೆಕಟ್ಟಿನ ನಿರ್ಮಾಣಕಾಲದಲ್ಲಿ ಕಲ್ಪಿತವಾದ ಉದ್ಯೋಗಾವಕಾಶ ಮುಂತಾದವು ಸಮಾವೇಶವಾಗುತ್ತಿವೆ. ವೆಚ್ಚಗಳು, ಆಣೆಕಟ್ಟಿನ ವಾಸ್ತವಿಕ ನಿರ್ಮಾಣವೆಚ್ಚ, ಯೋಜನೆಯ ಕಾಲದಲ್ಲಿ ಮುಳುಗಡೆಯಾಗಲಿರುವ ಕೃಷಿ ಹಾಗೂ ಅರಣ್ಯ ಪ್ರದೇಶಗಳ ನಾಶ ಮುಂತಾದವುಗಳನ್ನು ಒಳಗೊಳ್ಳುತ್ತವೆ. ಇಂಥ ಅಭಿವೃದ್ಧಿ ಯೋಜನೆಗಳು

ನಮ್ಮ ದೇಶದ ಆರ್ಥಿಕ ಸ್ಥಿತಿಯನ್ನು ಬಲಪಡಿಸುವುದಾದರೆ ಇಂಥವುಗಳಿಗ ತಗುಲುವ ವೆಚ್ಚಕ್ಕಿಂತ ಇವುಗಳಿಂದಾಗುವ ಲಾಭದ ಪ್ರಮಾಣವೇ ಗಣನೀಯವಾಗಿರಬೇಕು. ಒಂದು ಯೋಜನೆಯು ಅಂಗೀಕಾರಾರ್ಹವಾಗಬೇಕಾದರೆ ಅದರಿಂದಾಗುವ ಲಾಭ ಹಾಗೂ ನಿರ್ಮಾಣವೆಚ್ಚ 5 : 1 ಪ್ರಮಾಣದಲ್ಲಿರಬೇಕೆಂದು ಯೋಜನಾ ಆಯೋಗವು ತಿಳಿಸಿದೆ.

ಪಾವನ ಯೋಜನೆಯನ್ನು ಮೊಟ್ಟಮೊದಲ ಬಾರಿಗೆ ಕೈಗೆತ್ತಿಕೊಂಡಾಗ ನಿರೀಕ್ಷಿತ ಲಾಭ ಹಾಗೂ ವೆಚ್ಚ 6 ಮತ್ತು 1 ರ ಪ್ರಮಾಣದಲ್ಲಿದ್ದವು. ಯೋಜನೆಯ ಕಾರ್ಯ ಮುಂದುವರಿದಂತೆ ಸಾಮಗ್ರಿಗಳ ಬೆಲೆಗಳು ಏರಿದವು; ಈ ಮೊದಲು ನಿರೀಕ್ಷಿಸಿದ್ದಷ್ಟು ನೀರಾವರಿ ಸಾಮರ್ಥ್ಯವನ್ನು ಸಾಧಿಸುವುದು ಅಸಾಧ್ಯವಾಯಿತು ; ಲಾಭ ವೆಚ್ಚಗಳ ಮೊದಲಿನ ಲೆಕ್ಕಾಚಾರವೆಲ್ಲ ತಲೆಕೆಳಗಾಗಿ, ಅನುಪಾತ 0.9 ಆಯಿತು. ಈ ಲೆಕ್ಕಾಚಾರಗಳು ಪರಿಸರ ವೆಚ್ಚಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ನಿಜವಾಗಿ ಅವು ಅಧಿಕವಾಗಿವೆ. ಏಕೆಂದರೆ ನಮ್ಮ ಪ್ರತಿಯೊಂದು ನದೀ ಕಣಿವೆ ಯೋಜನೆಯಲ್ಲಿಯೂ ಜಲಾನಯನ ಪ್ರದೇಶಗಳಲ್ಲಿನ (Catchment area) ಅರಣ್ಯನಾಶದಿಂದ ಅಭಿವ್ಯಕ್ತವಾಗುವ ಸಸ್ಯರಾಶಿಯ ಬಗೆಗಿನ ಔದಾಸೀನ್ಯ, ವನ್ಯಜೀವಿಗಳ ನಾಶ, ಮಣ್ಣು ಸವಕಳಿ ಮುಂತಾದವು ಎದ್ದು ಕಾಣುವುದನ್ನು ನಾವು ಅಲ್ಲಗಳೆಯುವಂತಿಲ್ಲ. ಶ್ರೀ ವಿಜಯ ಪರಾಂಜಪೆಯವರು ಲಾಭವನ್ನು ಲೆಕ್ಕ ಹಾಕುವಾಗ ವೆಚ್ಚದ ಪ್ರಮಾಣಕ್ಕೆ ಹಾನಿಯ ವೆಚ್ಚಗಳನ್ನೂ ಸೇರಿಸಿದಾಗ ಅನುಪಾತವು 0.46 ಆದದ್ದು ಕಂಡು ಬಂದಿತು. ಅಂದರೆ ದೇಶವು ಯೋಜನೆಗಳಲ್ಲಿ ತೊಡಗಿರುವ ಹಣಕ್ಕೆ ಪ್ರತಿಯಾಗಿ ಸಿಗುವ ಲಾಭಾಂಶದ ಮಾತು ಒತ್ತಟ್ಟಿಗಿರಲಿ, ದೇಶವು ತೊಡಗಿಸಿದ ಬಂಡವಾಳಕ್ಕೆ ಹಿಮ್ಮುಖ ನಡೆಯ ಗತಿ ಒದಗುತ್ತದೆ. ಅಂದರೆ ದೇಶವು, ಬಂಡವಾಳವಾಗಿ ಒಂದು ರೂಪಾಯಿಯನ್ನು ತೊಡಗಿಸಿ, 46 ಪೈಸೆಗಳಷ್ಟು ಪ್ರತಿಫಲವನ್ನು ಪಡೆದಂತಾಯಿತು.

ಈ ಅಂಕಿ–ಅಂಶಗಳು ನಿಜವಾಗಿಯೂ ಕಣ್ಣು ತೆರೆಸುವಂತಿವೆ. ಪಾವನದಂಥ ಯೋಜನೆಗಳಿಂದ ದೇಶದ ಆರ್ಥಿಕ ಅಭಿವೃದ್ಧಿಯಾಗುತ್ತದೆ ಎಂಬ ಭ್ರಮೆ ನಮ್ಮಿಂದ ಇನ್ನೂ ತೊಲಗಿಲ್ಲ ಎಂಬುದನ್ನು ಇದು ತಿಳಿಸುತ್ತದೆ. ಇದಕ್ಕೆ ಕಾರಣ ನಾವು; ನಮ್ಮ ಔದಾಸೀನ್ಯ. ಪ್ರಮುಖ ಆಣೆಕಟ್ಟುಗಳು, ಕಾರ್ಖಾನೆಗಳು, ಹೆದ್ದಾರಿಗಳ ನಿರ್ಮಾಣದ ಕಡೆ ಲಕ್ಷ್ಯವನ್ನು ಕೇಂದ್ರೀಕರಿಸಿ ರಾಷ್ಟ್ರದ ನವನವೋನ್ಮೇಷವಾದ ನೈಸರ್ಗಿಕ ಸಂಪನ್ಮೂಲಗಳ ಬಂಡವಾಳದ ನಿರಂತರ ಹ್ರಾಸದ ಬಗ್ಗೆ ಕಣ್ಣು ಮುಚ್ಚಿಕೊಂಡಿದ್ದೇವೆ.

ಹಾಗೆಂದ ಮಾತ್ರಕ್ಕೆ ದೇಶದ ಅಭಿವೃದ್ಧಿಯ ದಿಕ್ಕಿನಲ್ಲಿ ಇಂಥ ಯೋಜನೆಗಳು ಮಹತ್ವದ ಹೆಜ್ಜೆಗಳಲ್ಲ ಎಂದು ಹೇಳಲಾಗದು ; ಮತ್ತು ಖಂಡಿತವಾಗಿಯೂ ಅವು ಹೌದು ಕೂಡ. ಆದರೆ ಅವುಗಳ ಕಡೆಗಿನ ನಮ್ಮ ಏಕಮುಖ ಲಕ್ಷ್ಯ, ನಮ್ಮ

ಅಭಿವೃದ್ಧಿ ಪ್ರಯತ್ನಗಳನ್ನು ವಿರೂಪಗೊಳಿಸಿದೆ. ನೀರಾವರಿ ಯೋಜನೆಗಳಿಂದ ಕೃಷಿ ಉತ್ಪಾದನೆಯಲ್ಲಿ ದೀರ್ಘಾವಧಿಯಲ್ಲಿ ಉಂಟಾಗುವ ಹೆಚ್ಚಳ ಮಹತ್ವದ್ದು. ಇದಕ್ಕೆ ಪೂರಕವಾಗಿ ದೊಡ್ಡ ಜಲಾಶಯಗಳನ್ನು ನಿರ್ಮಿಸಬೇಕು; ನೀರಿನ ಸರಿಯಾದ ಹಂಚಿಕೆ ಮತ್ತು ಬಳಕೆ ಆಗಬೇಕು. ಆದರೆ ನಾವು ಮೊದಲನೆಯದಕ್ಕೆ ಮಾತ್ರ ಹೆಚ್ಚು ಗಮನ ನೀಡುತ್ತೇವೆ. ಹೀಗಾಗಿ ನೀರಾವರಿ ಯೋಜನೆಯು ದೀರ್ಘಾವಧಿಯಲ್ಲಿ ನಿರೀಕ್ಷಿತ ಫಲನೀಡುವುದರಲ್ಲಿ ವಿಫಲವಾಗುವುದಷ್ಟೇ ಅಲ್ಲ, ಭೂಮಿಯ ಉತ್ಪಾದಕತೆಯನ್ನು ಕುಗ್ಗಿಸುತ್ತದೆ. ನಮ್ಮ ಬಹುತೇಕ, ಹತ್ತಿ ಬೆಳೆಯುವ ಕರಿ ಮಣ್ಣಿನ ಭೂಮಿಗಳಿಗೆ ಇದೇ ಗತಿ ಒದಗಿದೆ. ನೀರಾವರಿಯ ಇನ್ನೊಂದು ಮುಖವೆಂದರೆ-ಗಮನ ವಹಿಸಿ ಕಾಲುವೆಗಳನ್ನು ವ್ಯವಸ್ಥೆಗೊಳಿಸದೇ ಹೋದರೆ ಅತಿಯಾದ ನೀರಾವರಿಯಿಂದಾಗಿ ಬೇಸಾಯ ಭೂಮಿಗಳು ಜಲಮಯವಾಗುತ್ತವೆ. ತುಂಗಭದ್ರಾ ಮಲಪ್ರಭೆಗಳಂಥ ನೀರಾವರಿ ಯೋಜನೆಗಳಲ್ಲಿ ಇದೇ ಅವ್ಯವಸ್ಥೆ ಉಂಟಾಗಿದೆ. ಹೀಗಾಗಿ ನೀರಾವರಿ ಸೌಲಭ್ಯವುಳ್ಳ ಭೂಮಿಯು ಕೆಲವರ್ಷ ಉತ್ತಮ ಬೆಳೆಯನ್ನು ನೀಡಿದ ತರುವಾಯ, ಅಲ್ಲಿ ನೀರು ಮಡುಗಟ್ಟಿ ನಿಲ್ಲುವ ಸ್ಥಿತಿ ಒದಗಿ ಬಿತ್ತನೆಯನ್ನು ಕೈಬಿಡಬೇಕಾಗುತ್ತದೆ.

ಭೂಮಿಯನ್ನು ಹಾಳುಗೆಡಹುವ ಮತ್ತೊಂದು ಗಮನಾರ್ಹ ಅಂಶವೆಂದರೆ ಗಣಿಕೆಲಸ. ಇದಕ್ಕಾಗಿ ಗೋವಾದಲ್ಲಿ ಮ್ಯಾಂಗನೀಸ್ ಖನಿಜಕ್ಕಾಗಿ ಎಲ್ಲ ಬೆಟ್ಟಗಳಲ್ಲಿ ಹಣಿ ತೋಡಲಾಗಿದೆ. ಈ ಗಣಿ ಕಾರ್ಯಾಚರಣೆ ನಡೆಯುತ್ತಿರುವಾಗ, ಗಣಿಯ ತ್ಯಾಜ್ಯ ವಸ್ತುಗಳು ಹಳ್ಳಕ್ಕೆ ಹರಿದುಹೋಗಿ ಬತ್ತದ ಗದ್ದೆಗಳಲ್ಲಿ ಶೇಖರವಾಗುತ್ತಿದೆ. ಇದನ್ನು ತಡೆಯುವಲ್ಲಿ ಸಾಕಷ್ಟು ಗಮನ ಹರಿಸುತ್ತಿಲ್ಲ. ಹೀಗಾಗಿ ಎಷ್ಟೋ ಕೃಷಿ ಭೂಮಿ ಸತ್ವಹೀನವಾಗಿದೆ. ಗಣಿಗಳ ತ್ಯಾಜ್ಯ ವಸ್ತುಗಳು ಪ್ರವಾಹದೊಂದಿಗೆ ಹರಿದು ಬರುವುದರಿಂದ ಚಿಪ್ಪುಮೀನುಗಾರಿಕೆ (Shell fisheries) ಮಣ್ಣುಗೂಡುವ ಗಂಭೀರಸ್ಥಿತಿ ಒದಗಿದೆ. ಗೋವಾದ ಅಖಾತಗಳಲ್ಲಿ ಅಂದರೆ ಮಾಂಡವಿಯಂಥ ನದಿಗಳಲ್ಲಿ ಸಿಂಪಿನ ಹುಳು (bivalves), ಮೃದ್ವಂಗಿಗಳು, ಬಸವನಹುಳುಗಳು ಸಮೃದ್ಧವಾಗಿ ಲಭ್ಯವಿರುತ್ತಿದ್ದವು. ಈಗ ಗಣಿಗಳ ಸೂಕ್ಷ್ಮಧೂಳೀಕಣಗಳಿಂದಾಗಿ ಈ ಜೀವಿಗಳು ನಾಶವಾಗತೊಡಗಿದಂದಿನಿಂದ ಮತ್ಸ್ಯಜಾತಿ ಹೇಳಹೆಸರಿಲ್ಲದಾಗಿದೆ. ಗಣಿಗೆಲಸದಿಂದಾಗುವ ಲಾಭ ಹಾಗೂ ಅದಕ್ಕೆ ಪ್ರತಿಯಾಗಿ ಉಂಟಾಗುವ ಚಿಪ್ಪುಮೀನುಗಳ ನಾಶ, ಭತ್ತದ ಉತ್ಪಾದನೆಯಲ್ಲಿ ಆಗಿರುವ ಭಾರಿ ಇಳಿತ ಮತ್ತು ಗಣಿಕೆಲಸಕ್ಕೆ ತಗಲುವ ವೆಚ್ಚ ಇವುಗಳ ತುಲನ ಪತ್ರವನ್ನು ಯಾರೊಬ್ಬರೂ ಸಿದ್ಧಪಡಿಸದಿರುವುದು ಖೇದದ ಅಂಶ. ಗಣಿಗೆಲಸದಿಂದ ಸಿಗುವ ಲಾಭಕ್ಕಿಂತ ಈ ವೆಚ್ಚಗಳ ಪ್ರಮಾಣವೇ ಅಧಿಕವಿರುವ ಸಾಧ್ಯತೆಯೇ ಹೆಚ್ಚು. ಹಾಗಿದ್ದರೂ ಗಣಿಗೆಲಸ ಹಾಗೂ ಅದರಿಂದುಂಟಾಗುವ ಹಾನಿ–ಎರಡೂ ಮುಂದುವರಿಯುತ್ತಲೇ ಇರುತ್ತವೆ. ಇದರ ಕಾರಣ ಸ್ಪಷ್ಟ ಏಕೆಂದರೆ ಗಣಿಗೆಲಸದ ಲಾಭಾಂಶವು, ಸಮಾಜದ ಸುವ್ಯವಸ್ಥಿತ

ಶಕ್ತಿಶಾಲಿ ಜನವರ್ಗಕ್ಕೆ ಸಂದಾಯವಾದರೆ, ಗಣಿಗೆಲಸದ ವೆಚ್ಚ ಹಾಗೂ ಹಾನಿಯ ಭಾರವು, ಸಾವಿರಾರು ಗಟ್ಟಲೆ ಇರುವ ಸಣ್ಣ ಪ್ರಮಾಣದ ಬೇಸಾಯಗಾರರು, ಬೆಸ್ತರು ಮತ್ತು ದೈನಂದಿನ ಆಹಾರವಾಗಿರುವ ಚಿಪ್ಪು ಮೀನಿನಿಂದ ಶಾಶ್ವತವಾಗಿ ವಂಚಿತರಾಗುವ ಜನರು–ಇಂಥವರ ಹೆಗಲೇರುತ್ತದೆ. ಬಡತನದಲ್ಲಿ ನರಳುತ್ತಿರುವ ಈ ಜನ ತಮಗಾಗುತ್ತಿರುವ ಹಾನಿಯನ್ನು ಒಕ್ಕೊರಲಿನಿಂದ ಪ್ರತಿಭಟಿಸಲಾರದಷ್ಟು ನಿಸ್ಸಹಾಯಕರು.

ಇಂಥದೇ ಸ್ಥಿತಿಯ ಇನ್ನೊಂದು ಚಿತ್ರ–ಕಾಗದದ ಉದ್ಯಮದಿಂದ ತಮ್ಮ ಹಿತಾಸಕ್ತಿಗಳ ಗೋರಿಯಾಗುತ್ತಿರುವುದನ್ನು ಕಣ್ಣಾರೆ ಕಾಣುತ್ತಿರುವ ಕರಕುಶಲ ಗಾರರು ಹಾಗೂ ಸಣ್ಣ ಪ್ರಮಾಣದ ಬೇಸಾಯಗಾರರು. ಈ ಎರಡೂ ಗುಂಪುಗಳ ಜನರಿಗೆ ಬಿದಿರು ಅತ್ಯವಶ್ಯಕವಾದ ಮತ್ತು ಮಹತ್ವದ ಕಚ್ಚಾವಸ್ತು. ಹಳೆಯ ಕಾಲದಲ್ಲಿ ಘಟ್ಟದ ಪ್ರದೇಶಗಳಲ್ಲಿ ಗ್ರಾಮೀಣ ಮನೆಗಳ ನಿರ್ಮಾಣದಲ್ಲಿ ಇದೇ ಆಧಾರ ಸ್ತಂಭವಾಗಿತ್ತು. ಮದುವನದ ಗುಡ್ಡಗಾಡು ಜನಾಂಗದವರು ಮೂರೇ ಮೂರು ದಿನಗಳಲ್ಲಿ ಸ್ವಂತಶ್ರಮದಿಂದ ಸುಂದರ ಸುವಿಶಾಲ ಬಿದಿರಿನ ಹಟ್ಟಿಯನ್ನು ನಿರ್ಮಿಸುತ್ತಿದ್ದರು. ಧಾನ್ಯ ಸಂಗ್ರಹಣೆಗೆ, ಕೃಷಿ ಉಪಕರಣಗಳ ನಿರ್ಮಾಣಕ್ಕೆ ಬಿದಿರನ್ನು ಬಳಸುತ್ತ ಬಂದಿದ್ದು, ಅದು ಒಂದು ವಿಧದಲ್ಲಿ ಪುರಾತನ ಬಹುಪಯೋಗಿ ವಸ್ತುವಾಗಿತ್ತು. ಇದರ ಮಥಿತಾರ್ಥವೆಂದರೆ ಬಿದಿರು ಕೆಲಸವು, ಬುಟ್ಟಿ ಹೆಣೆಯು ವವರ ಬೃಹತ್ ಸಮೂದಾಯಕ್ಕೆ ಪೂರ್ಣಾವಧಿ ಉದ್ಯೋಗವನ್ನು, ಸಮಾಜದ ಹಲವು ದುರ್ಬಲ ವರ್ಗಗಳವರಿಗೆ ಅಲ್ಪಾವಧಿ ಉದ್ಯೋಗವನ್ನು ಒದಗಿಸಬಲ್ಲದು. ಹಾಗಿದ್ದೂ ಬ್ರಿಟಿಷ್ ಆಳ್ವಿಕೆಯಲ್ಲಿದ್ದ ಅರಣ್ಯ ಇಲಾಖೆಗಳಲ್ಲಿ ಬಿದಿರನ್ನು ಒಂದು ಕಳೆಯಾಗಿ ಕಂಡು ಅದರ ನಿರ್ಮೂಲನೆಗೆ ಆದೇಶ ನೀಡಲಾಯಿತು. ಏಕೆಂದರೆ ತೇಗದಂಥ ಚೌಬೀನೆಗೆ ಇದ್ದ ಮಾರುಕಟ್ಟೆ ಬೇಡಿಕೆಯನ್ನು ಪೂರೈಸುವಲ್ಲಿ ಅವರ ಗಮನ ಕೇಂದ್ರೀಕೃತವಾಗಿತ್ತು. ಕಾಗದದ ಉದ್ಯಮಕ್ಕೆ ಬಿದಿರು ಕಚ್ಚಾವಸ್ತುವಾಗಿ ಬಳಕೆಯಾಗ ತೊಡಗಿದ ಮೇಲೆ ಅರಣ್ಯ ಇಲಾಖೆಯವರು ಬಿದಿರನ್ನು ಸಂಪನ್ಮೂಲ ವಾಗಿ ಪರಿಗಣಿಸತೊಡಗಿದರು. ಆಗ ಈ ಸಂಪನ್ಮೂಲವು ಕಾಗದ ಉದ್ಯಮಕ್ಕೆ ಭಾರೀ ರಿಯಾಯಿತಿ ದರದಲ್ಲಿ ಅಂದರೆ, ಅದರ ಮಾರುಕಟ್ಟೆ ಬೆಲೆ ಟನ್ ಒಂದಕ್ಕೆ ಒಂದು ಸಾವಿರ ರೂಪಾಯಿಗಳಿಗಿಂತ ಅಧಿಕವಿದ್ದಾಗ, ಉದ್ಯಮಕ್ಕೆ ಒಂದು ರೂಪಾಯಿಗೆ ಒಂದು ಟನ್ ಪ್ರಮಾಣದಲ್ಲಿ ದೊರಕುತ್ತಿತ್ತು.

ಪುಕ್ಕಟೆಯಾಗಿ ಸಿಗುವ ಯಾವುದನ್ನೇ ಆಗಲಿ ಅನಾದರದಿಂದ ಅತಿಯಾಗಿ ಬಳಸುವುದು ಮಾನವನ ಪ್ರವೃತ್ತಿ. ಹೀಗಾಗಿ ಉದ್ಯಮಕ್ಕೆ ಬಿದಿರು ತೀರಾ ಅಗ್ಗದ ಬೆಲೆಯಲ್ಲಿ ದೊರಕಿದಾಗ ಬಿದಿರಿನ ಬಗ್ಗೆ ಅದು ದುರ್ಲಕ್ಷ್ಯ ತಾಳಿತು; ಸಾಧ್ಯ ವಾದಷ್ಟೂ ಕಡಿಮೆ ಬೆಲೆಗೆ ಅದನ್ನು ದೊರಕಿಸಿಕೊಳ್ಳುವುದರಲ್ಲಿ ಆಸಕ್ತಿ ವಹಿಸಿತು. ಕಂಟ್ರಾಕ್ಟರುಗಳು ರಸ್ತೆಗೆ ಸಮೀಪವಾಗಿದ್ದ ಬಿದಿರು ಮೆಳೆಗಳನ್ನು ಕಡಿದು ಹಾಕಿದರು;

ರಸ್ತೆಗಳಿಂದ ದೂರವಾಗಿದ್ದ ಮೆಳೆಗಳು ಹಾಗೆಯೇ ಉಳಿದುಕೊಂಡವು. ನಿರ್ದಿಷ್ಟ ಪ್ರದೇಶವೊಂದರಲ್ಲಿ ಬೆಳೆದಿರುವ ಒಟ್ಟು ಬಿದಿರಿನಲ್ಲಿ, ಗೊತ್ತುಪಡಿಸಿದಷ್ಟು ಭಾಗವನ್ನು ಮಾತ್ರ ತೆಗೆಯಬೇಕೆಂಬ ನಿಯಮವನ್ನು ಕಂಟ್ರಾಕ್ಟರುಗಳು ಪಾಲಿಸಲಿಲ್ಲ. ರಸ್ತೆಗೆ ಸಮೀಪವಾಗಿದ್ದ ಬಿದಿರುಮೆಳೆ ಮತ್ತೊಮ್ಮೆ ಚಿಗುರಿದಾಗ, ದನಕರುಗಳು ಅವನ್ನು ತಿಂದು ಮುಗಿಸಿದವು. ಹೀಗಾಗಿ ರಸ್ತೆಗೆ ಸಮೀಪವಾಗಿದ್ದ ಬಿದಿರು ಮೆಳೆಗಳು ಸಂಪೂರ್ಣವಾಗಿ ನಾಶವಾಗಿ ಹೋದವು. ಕಾಗದ ಹಾಗೂ ಇನ್ನಿತರ ಉದ್ಯಮಗಳಿಗಾಗಿ ಬಿದಿರನ್ನು ಉಪಯೋಗಿಸಲಾರಂಭಿಸಿದ ಮೇಲೆ ದೇಶದ ಬಿದಿರಿನ ಒಟ್ಟು ಸಂಗ್ರಹದ ಶೇಕಡಾ 10 ರಷ್ಟು ಕರಗಿದೆ. ಬಂಗಾರದ ಮೊಟ್ಟೆಯಿಡುವ ಕೋಳಿಯನ್ನು ಕೊಂದಂತಾಗಿದೆ. ಅಂಥ ಕೋಳಿಯನ್ನು ಕೊಂದರೂ ಉದ್ಯಮಕ್ಕೆ ಬೇರೆ ಮಾರ್ಗಗಳಿವೆ. ಕರ್ನಾಟಕವನ್ನು ಕೈ ಬಿಟ್ಟು ಬಿದಿರಿಗಾಗಿ ಅವರು ಅರುಣಾಚಲ ಪ್ರದೇಶಕ್ಕೆ ಹೋಗಬಹುದು; ಅಥವಾ ಬೇರೆ ಗಟ್ಟಿ ಮರಗಳನ್ನು ಬಳಸಬಹುದು. ಆದರೆ ಹಳ್ಳಿಗಾಡಿನ ರೈತರು ಹಾಗೂ ಬುಟ್ಟಿ ಹೆಣೆಯುವವರಿಗೆ ಬೇರೆ ದಾರಿಯಿಲ್ಲ; ಪರಿಸರದ ಅವನತಿಯಿಂದಾಗಿ ನಿಜವಾಗಿ ಹಾನಿಗೀಡಾಗುವವರು ಅವರು.

ಈ ರೀತಿ ಬಂಗಾರದ ಮೊಟ್ಟೆ ಇಡುವ ಕೋಳಿಗಳ ಸಾಮೂಹಿಕ ಹತ್ಯೆಗೆ ಮತ್ತೊಂದು ನಿದರ್ಶನ ಮೀನುಗಾರಿಕೆ. ಏಕೆಂದರೆ ಅರಣ್ಯಗಳಂತೆ ಮೀನುಗಳೂ ನವೀಕರಣಗೊಳ್ಳಬಲ್ಲ ಸಂಪನ್ಮೂಲವಿದ್ದಂತೆ, ನಾವು ಮೂಲ ಧನವನ್ನೇ ಭೋಗಿಸಿ ಮುಗಿಸದೇ, ಮೂಲ ಧನದ ಮೇಲೆ ಸಿಗುವ ಬಡ್ಡಿಯಿಂದ ತೃಪ್ತರಾಗುವ ಪ್ರವೃತ್ತಿಯವರಾದರೆ ಇಂಥ ಸಂಪನ್ಮೂಲವನ್ನು ಭದ್ರವಾಗಿ ಉಳಿಸಿಕೊಂಡೂ ಅದರ ಮೇಲಿನ ಲಾಭವನ್ನು ಶಾಶ್ವತವಾಗಿ ಪಡೆಯಬಹುದು. ನಮ್ಮ ಹಳೆಯ ಕಾಲದ ಯಾಂತ್ರಿಕೃತವಲ್ಲದ ಮೀನುಗಾರಿಕೆ ಪದ್ಧತಿಯಲ್ಲಿ ಕರಾವಳಿ ಮೀನುಗಾರಿಕೆಯಲ್ಲಿ ಇಂಥ ಸಮತೆಯನ್ನು ಸಾಧಿಸಲಾಗಿತ್ತು. ಅವರು ಸುರಕ್ಷಾ ನಿಧಿ ಎಂದು ನಿರ್ದಿಷ್ಟ ಪ್ರಮಾಣದಷ್ಟನ್ನು ಬಿಟ್ಟು, ಮೂಲ ಸಂಗ್ರಹದ ಮೇಲಿನ ಬಡ್ಡಿಯ ಶೇಕಡಾ 80 ರಷ್ಟನ್ನು ಉತ್ಪಾದಿಸಿಕೊಳ್ಳುತ್ತಿದ್ದರೆಂದು ಅಂದಾಜು ಮಾಡಲಾಗಿದೆ. ಈ ಮೀನುಗಾರಿಕೆಯಲ್ಲಿ ತೀರದಿಂದ ದೂರವಿರುವ ಮೀನುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಳಸಿಕೊಳ್ಳಲಿಲ್ಲ. ಹೀಗಾಗಿ ಆಧುನಿಕ ಮಾದರಿಯ ಬಲೆಗಳನ್ನುಳ್ಳ ಹೆಚ್ಚು ಸಮರ್ಥ ಯಾಂತ್ರಿಕೃತ ದೋಣಿಗಳನ್ನು ಬಳಸಿ ತೀರದಿಂದ ದೂರವಿರುವ ಮೀನುಗಳನ್ನು ಪಡೆಯಲು ಸಾಕಷ್ಟು ಅವಕಾಶವಿತ್ತು. ಆದರೆ ದುರ್ದೈವವೆಂದರೆ ನಡುಸಾಗರದ ಮೀನುಗಳನ್ನು ಹಿಡಿಯಲು ಸಿದ್ಧಪಡಿಸಿದ ಯಾಂತ್ರೀಕೃತ ದೋಣಿಗಳು ಕರಾವಳಿಯ ಸಂಗ್ರಹವನ್ನು ಬಯಸಿವೆ. ಏಕೆಂದರೆ ಅಧಿಕ ಲಾಭ ತರುವ ಪ್ರಾನ್‌ಗಳ ಸಂಗ್ರಹಣೆ ಕರಾವಳಿಗೆ ಹತ್ತಿರದಲ್ಲಿದೆ. ಹೀಗಾಗಿ ಕರಾವಳಿ ಪ್ರದೇಶದಲ್ಲಿನ ಮೀನಿನ ದಾಸ್ತಾನು ಮಿತಿಮೀರಿ ಶೋಷಿತವಾಗಿದ್ದು, ಮರಿಮೀನುಗಳೇ ನಾಶವಾಗಿ, ಮೀನಿನ ಮೂಲ ಸಂಗ್ರಹವೇ ಕ್ಷೀಣಿಸಿ, ಮೀನುಗಳ ಸಂಖ್ಯೆ ಭರದಿಂದ ತಗ್ಗುತ್ತಿದೆ.

ಇಲ್ಲಿಯೂ ಸಣ್ಣ ಪ್ರಮಾಣದ ಬೆಸ್ತರು ಮತ್ತು ಕರಾವಳಿಯ ಜನರೇ ತೊಂದರೆಗೀಡಾಗುವವರು.

ಪರಿಸರದ ದುರ್ಗತಿಯಿಂದಾಗಿ ತೆರಬೇಕಾಗುವ ದಂಡ ಇಡೀ ಜಗತ್ತಿನಾದ್ಯಂತ ಅದರಲ್ಲೂ ವಿಶೇಷವಾಗಿ ಭಾರತದಲ್ಲಿ ಅಧಿಕವಾಗಿದೆ. ಪರಿಸರದ ದುರ್ಗತಿಗಾಗಿ ನಾವು ತೆರಬೇಕಾಗಿರುವ ಬೆಲೆಯ ಬಗ್ಗೆ ನಾವು ನಿರ್ಲಕ್ಷ್ಯದಿಂದಿರಲು ಕಾರಣ– ಪರಿಸರದ ಅವನತಿಯ ನಿಜವಾದ ಬಿಸಿ ತಟ್ಟಿರುವುದು ಅಸಂಖ್ಯ ಬಡ, ಅಸಂಘಟಿತ ಸಣ್ಣ ರೈತರಿಗೆ, ಕರಕುಶಲಗಾರರಿಗೆ ಹಾಗೂ ಬೆಸ್ತರಿಗೆ; ಆದರೆ ಈ ಔದಾಸೀನ್ಯ ಹೀಗೇ ಮುಂದುವರಿಯುವಂತಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ವ್ಯಾಪಕವಾದ ಬಡತನದಿಂದ ನಮ್ಮನ್ನು ಮೇಲೆತ್ತಲು ಆರ್ಥಿಕ ಅಭಿವೃದ್ಧಿಯ ಅಗತ್ಯವೇನೋ ಇದೆ, ನಿಜ; ಆದರೆ ಅದಕ್ಕಾಗಿ ಪರಿಸರವನ್ನು, ದೇಶದ ದುರ್ಬಲ ವರ್ಗಗಳ ಜನರನ್ನು ಬಲಿ ಕೊಡುವಂತಾಗಬಾರದು.

## 'ಅಂಕಣ' ಪ್ರಕಾಶನದ ಪ್ರಕಟಣೆಗಳು

# ಟಿಪ್ಪಣಿಗಳು

**ಗಜಲಕ್ಷ್ಮಿವಿಗ್ರಹಗಳು : ಒಂದು ಜಾನಪದ ನಂಬಿಕೆ: ಡಾ|| ಎಂ. ಚಿದಾನಂದಮೂರ್ತಿ**

ಹಿಂದೆ ಲೇಖನವೊಂದರಲ್ಲಿ (ಅಂಕಣ: 6:3) ನಾನು ದೇವಾಲಯದಿಂದ ಬೇರೆಯಾಗಿ ಭಗ್ನಗೊಂಡು ಪೂಜೆಯಿಂದ ವಂಚಿತವಾಗಿರುವ ಶೇಷಶಾಯಿ ವಿಷ್ಣು ಶಿಲ್ಪಗಳು ಧಾರ್ಮಿಕ ನಿಯೋಗವನ್ನು ಕಳೆದುಕೊಂಡರೂ ಜಾನಪದರು ಅವುಗಳಿಗೆ ಸಾಮಾಜಿಕ ನಿಯೋಗವನ್ನು ಕಲ್ಪಿಸಿ ಅವುಗಳು ಉಪಯುಕ್ತವಾಗುವಂತೆ ಮಾಡಿಕೊಂಡ ಬಗೆಯ ಕಡೆ ಓದುಗರ ಗಮನವನ್ನು ಸೆಳೆದಿದ್ದೇನೆ. "ಮಾರ್ಗೀ ಸಂಪ್ರದಾಯದ ವಿಷ್ಣುವು ದೇಶೀಸಂಪ್ರದಾಯದ ಕೆಟ್ಟ ಹುಡುಗನಾಗಿ ಪರಿವರ್ತನೆಯನ್ನು ಹೊಂದಿ, ಆ ಮೂಲಕ ಜನಜೀವನಕ್ಕೆ ಇನ್ನೂ ಹತ್ತಿರವಾದ, ಜನಜೀವನದ ಒಂದು ಅವಿಭಾಜ್ಯ ಅಂಗವಾದ".[1] ಹೀಗೆ ಮಾರ್ಗೀ ಸಂಪ್ರದಾಯವನ್ನು ಜಾನಪದರು ತಮ್ಮ ಉದ್ದೇಶಕ್ಕೆ ಬಳಸಿಕೊಂಡಿರುವ ಅಂತಹುದೇ ಇನ್ನೊಂದು ನಿದರ್ಶನ ನನ್ನ ಗಮನಕ್ಕೆ ಬಂದಿದೆ.

ದಕ್ಷಿಣ ಭಾರತದ ದೇವಾಲಯಗಳಲ್ಲಿ ಗಜಲಕ್ಷ್ಮಿಯ ಆಶಯವು ಸಾಕಷ್ಟು ಪ್ರಸಿದ್ಧವಾದುದು. ಎರಡು ಆನೆಗಳು ಆಚೆ ಈಚೆ ನಿಂತು ತಮ್ಮ ಸೊಂಡಿಲುಗಳಲ್ಲಿ ಕುಂಭವನ್ನು ಹಿಡಿದು ಮಧ್ಯೆ ಕುಳಿತಿರುವ ಸ್ತ್ರೀದೇವತೆಗೆ ನೀರೆರೆಯುವ ಶಿಲ್ಪವೇ ಗಜಲಕ್ಷ್ಮಿ. ಇದನ್ನು ದೇವಾಲಯಗಳ ಬಾಗಿಲುವಾಡಗಳ ಮೇಲ್ಭಾಗದ ಮಧ್ಯದಲ್ಲಿ, ತೊಲೆಗಳ ಮೇಲೆ ಕೆತ್ತುವುದು ಸಾಮಾನ್ಯ; ಮತ್ತು ಗಜಲಕ್ಷ್ಮಿಯ ಕೆತ್ತನೆಯಿದ್ದರೆ ಆ ಕಟ್ಟಡ ಅಥವಾ ಕೆರೆ ಬಹುಕಾಲ ಭದ್ರವಾಗಿ ಉಳಿಯುವುದೆಂಬ ನಂಬಿಕೆಯಿದೆ.

ಈಚೆಗೆ ನನ್ನ ಪ್ರವಾಸದಲ್ಲಿ ಹಲವಾರು ಭಗ್ನಗೊಂಡ ಗಜಲಕ್ಷ್ಮಿ ವಿಗ್ರಹಗಳನ್ನು ಕಂಡೆ. ತರೀಕೆರೆ ತಾಲೂಕಿನ ಬುಕ್ಕಾಂಬೂದಿ ಗ್ರಾಮದ ಮಧ್ಯೆ ರಸ್ತೆಯ ಬದಿಯಲ್ಲಿ ಒಂದು ಭಗ್ನ ಗಜಲಕ್ಷ್ಮೀ ವಿಗ್ರಹವಿದೆ. ಅದರ ಬಗ್ಗೆ ಯಾವುದೇ ನಂಬಿಕೆಯೂ ಇರುವಂತೆ ತೋರದು. ಹರಿಹರ ತಾಲೂಕಿನ ಕೊಂಡಜ್ಜಿ ಗ್ರಾಮದ ಕೆರೆ ಹತ್ತಿರವಿರುವ ಹನುಮಂತ ದೇವರ ಗುಡಿಯ ಹಿಂದೆ ಬಂದಮ್ಮನ (ಬನದಮ್ಮನ) ವಿಗ್ರಹವೂ ಅದರ ಎದುರಿಗೆ ಗಜಲಕ್ಷ್ಮಿ ಶಿಲ್ಪವೂ ಇದೆ. ಇಲ್ಲಿಯೂ ಗಜಲಕ್ಷ್ಮಿಯನ್ನು ಕುರಿತಂತೆ ಯಾವುದೇ ನಂಬಿಕೆ ಅಥವಾ ಆಚರಣೆಯೂ ಇದ್ದಂತೆ ತೋರುವುದಿಲ್ಲ.

---

1. ಎಂ. ಚಿದಾನಂದಮೂರ್ತಿ 'ಪುರಾವಸ್ತು ಶಾಸ್ತ್ರ (Antiquelore) ಅಥವಾ ಪಳೆವಸ್ತುಗಳಿಗೆ ಸಂಬಂಧಿಸಿದ ಜಾನಪದಶಾಸ್ತ್ರ', ಅಂಕಣ. 6:3. ಜನವರಿ–ಫೆಬ್ರುವರಿ. 1985. ಪು. 9.

ಬಳ್ಳಾರಿಜಿಲ್ಲೆಯ ಹಗರಿ ಬೊಮ್ಮನಹಳ್ಳಿ ತಾಲೂಕಿನ ಮಾಲ್ವಿ ಎಂಬ ಗ್ರಾಮದ ಬೀದಿಯಲ್ಲಿ ಒಂದು ಸುಂದರ ಗಜಲಕ್ಷ್ಮಿ ವಿಗ್ರಹವಿದೆ. ಪಕ್ಕದ ಮನೆಯವರು ಅದಕ್ಕೆ ದಿನವೂ ಪೂಜೆ ಸಲ್ಲಿಸುತ್ತಾರೆ. ಊರಲ್ಲಿ ಯಾರಾದರೂ ಗರ್ಭಿಣಿಗೆ ಸುಲಭವಾಗಿ ಹೆರಿಗೆಯಾಗದಿದ್ದರೆ ಮೇಲ್ಮುಖವಾಗಿ ಬಿದ್ದಿರುವ ಆ ವಿಗ್ರಹದ ಕಲ್ಲನ್ನು ಮಗುಚಿ ಹಾಕುತ್ತಾರೆ. ಹೆರಿಗೆ ಆದಮೇಲೆ ಅದನ್ನು ಮೇಲ್ಮುಖಮಾಡಿ ಅದಕ್ಕೆ ಪೂಜೆ ಸಲ್ಲಿಸುತ್ತಾರೆ; ಕೆಲವೆಡೆ ಎಣ್ಣೆಬಿಡುತ್ತಾರೆ. ಅದೇ ಗ್ರಾಮಕ್ಕೆ ಸಮೀಪದ ಕೋಡಿಹಳ್ಳಿಯಲ್ಲೂ ಗಜಲಕ್ಷ್ಮಿ ವಿಗ್ರಹವಿದೆ ಮತ್ತು ಮೇಲೆ ಹೇಳಿದ ಆಚರಣೆ ಅಲ್ಲೂ ಉಂಟು. ಹರಪನ ಹಳ್ಳಿ ತಾಲೂಕಿನ ನಂದಿಬೇವೂರಿನ ಆಂಜನೇಯ ದೇವಾಲಯದ ಹಿಂದೆ ಒಂದು ಗಜಲಕ್ಷ್ಮಿ ವಿಗ್ರಹದ ಬಗ್ಗೆಯೂ ಅದೇ ಆಚರಣೆಯಿದೆ (ನಾನು ನೋಡಿದಾಗ ಅದನ್ನು ಮಗುಚಿ ಹಾಕಲಾಗಿತ್ತು. ಯಾರೋ ಮಗುಚಿ ಹಾಕಿದ್ದನ್ನು ಸರಿಪಡಿಸಲು ಮರೆತಿದ್ದರು; ಅಥವಾ ಹೆರಿಗೆ ಕಷ್ಟವಾಗಿ ಮಗುವಿನ ಜನನದಲ್ಲಿ ಏನೋ ಏರುಪೇರಾಗಿರಬಹುದು) ಹಗರಿ ಬೊಮ್ಮನ ಹಳ್ಳಿಯ ಪಕ್ಕದ ಹಳೆಯ ಬೊಮ್ಮನಹಳ್ಳಿಯಲ್ಲಿ ಒಂದು ಗಜಲಕ್ಷ್ಮಿ ಕಲ್ಲಿದೆ. ಅದೇ ನಂಬಿಕೆ ಆಚರಣೆಗಳುಂಟು. ಹಗರಿ ಬೊಮ್ಮನ ಹಳ್ಳಿ ಮತ್ತು ಉಪ್ಪಿನಾಯಕನ ಹಳ್ಳಿಗಳ ಮಧ್ಯೆ ರಸ್ತೆಯ ಪಕ್ಕದಲ್ಲಿ ಒಂದು ಬಹಳ ಭಿನ್ನವಾದ ಗಜಲಕ್ಷ್ಮಿ ವಿಗ್ರಹ ಬಿದ್ದಿತು. ಅದನ್ನು ಕುರಿತಂತೆ ಮೇಲಿನ ಆಚರಣೆ ಇದೆಯೇ ಎಂಬುದನ್ನು ತಿಳಿಯಲಾಗಲಿಲ್ಲ.

ಒಟ್ಟಾರೆ, ಬಳ್ಳಾರಿ ಜಿಲ್ಲೆಯಲ್ಲಿ ವ್ಯಾಪಕವಾಗಿ ಗಜಲಕ್ಷ್ಮಿ ವಿಗ್ರಹಗಳು ಭಿನ್ನವಾಗಿ ಬಿದ್ದಿರುವೆಡೆಗಳಲ್ಲೆಲ್ಲ ಮೇಲಿನ ನಂಬಿಕೆ ಮತ್ತು ಆಚರಣೆಗಳು ಪ್ರಚಲಿತವಾಗಿದೆ. ಆ ಜಿಲ್ಲೆಯ ಸುತ್ತ ಮುತ್ತಣ ಜಿಲ್ಲೆಗಳಲ್ಲೂ ಆ ನಂಬಿಕೆ ಆಚರಣೆಗಳಿರಬಹುದಾದರೂ, ಹರಿಹರ ತಾಲೂಕು ಮತ್ತು ಪಕ್ಕದ ಶಿವಮೊಗ್ಗ ಜಿಲ್ಲೆಗಳಲ್ಲಿ ಆ ನಂಬಿಕೆಯಿರುವಂತೆ ತೋರದು. ಗಜಲಕ್ಷ್ಮಿವಿಗ್ರಹಕ್ಕೆ ಸಂಬಂಧಿಸಿದ ನಂಬಿಕೆಯು ಹರಡಿರುವ ಪ್ರದೇಶದ ವ್ಯಾಪ್ತಿಯನ್ನು ಖಚಿತವಾಗಿ ಹೇಳಬೇಕಾದರೆ ವ್ಯಾಪಕವಾದ ಕ್ಷೇತ್ರಾಧ್ಯಯನ ನಡೆಯಬೇಕು.

'ಗಜಗರ್ಭ' ಎಂಬುದು ಬಹಳ ಜನಪ್ರಿಯವಾದ ಉಕ್ತಿ. ಆನೆಗಳಿಗೆ ಗರ್ಭಧಾರಣೆಯಾಗಲಿ ಹೆರಿಗೆಯಾಗಲಿ ನಿಧಾನ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಆ ಉಕ್ತಿಗೆ ವಿಳಂಬ,ತ್ರಾಸು ಎಂಬರ್ಥ ಬಂದಿದೆ. ಲಕ್ಷ್ಮಿಯು ಮಂಗಲಕಾರಕಳು-ಈ ಹಿನ್ನೆಲೆಯಲ್ಲಿ ಗಜಲಕ್ಷ್ಮಿ ವಿಗ್ರಹವನ್ನು ಮಗುಚಿ ಹಾಕುವುದರ ಮೂಲಕ ಆ ದೈವಕ್ಕೆ ಜನ ತಮ್ಮ ಸಂಕಟವನ್ನು ನಿವೇದಿಸಿಕೊಳ್ಳುವ ನಂಬಿಕೆ ಹುಟ್ಟಿರುವಂತಿದೆ. ಜನಕ್ಕೆ ತೊಂದರೆಯಾದಾಗ ದೈವಗಳಿಗೆ ಅನಾನುಕೂಲ ಉಂಟು ಮಾಡುವ ಪದ್ಧತಿಯುಂಟು. ಮಳೆ ಬಾರದಿದ್ದರೆ ಆಂಜನೇಯನಿಗೆ ಮೆಣಸಿನಕಾಯಿ ಅರೆದು ಹಚ್ಚುವುದು, ಶಿವಲಿಂಗವನು ನೀರಲ್ಲಿ ಮುಳುಗಿಸಿಡುವುದು ಇವೇ ಮೊದಲಾದ ಆಚರಣೆಗಳುಂಟು. ಗಜಲಕ್ಷ್ಮಿ ವಿಗ್ರಹವನ್ನು ಮಗುಚಿ ಹಾಕುವುದು ಅದೇ ಬಗೆಯಾದ ಆಚರಣೆ, ಹೆರಿಗೆ ಸುಲಭ

ವಾದರೆ ಅವಳಿಗೆ ಪೂಜೆ ಉಂಟು; ಇಲ್ಲದಿದ್ದರೆ ಪೂಜೆ ಇಲ್ಲ ಎಂಬ ವಿಚಾರವನ್ನು ಕೊಟ್ಟಂತೆ.

ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ದೇವಾಲಯದ ಭಾಗವಾಗಿ ಗಜಲಕ್ಷ್ಮಿ ವಿಗ್ರಹ ವಿದ್ದರೆ ಅದು ಅಂತಹ ವಿಶಿಷ್ಟ ಮಹತ್ವವನ್ನು ಪಡೆಯುವುದಿಲ್ಲ. ದೇವಾಲಯ ಹಾಳಾಗಿ ಗಜಲಕ್ಷ್ಮಿ ವಿಗ್ರಹವು ಬೀದಿ ಪಾಲಾಗಿದ್ದಾಗ ಮಾತ್ರ ಅದಕ್ಕೆ ಒಂದು ಮಹತ್ವ ಪ್ರಾಪ್ತವಾಗುತ್ತದೆ. ವಿಗ್ರಹ ವ್ಯರ್ಥವಾಗಲು ಜನ ಬಿಡಲಿಲ್ಲ; ಅದಕ್ಕೊಂದು ನಂಬಿಕೆಯನ್ನು ಕಲ್ಪಿಸಿ ತಮ್ಮ ಬದುಕಿನ ಭಾಗವಾಗುವಂತೆ ಮಾಡಿ ಕೊಂಡರು. ಶೇಷಶಾಯಿ ವಿಷ್ಣುವಿನ ಬಗ್ಗೆ ನಡೆದಂತಹ ಪ್ರಕ್ರಿಯೆಯೇ ಇಲ್ಲಿಯೂ ಕೆಲಸ ಮಾಡಿದೆ ಎಂಬುದನ್ನು ಸ್ಮರಿಸಬಹುದು.

---

Statement about ownership and other particulars about Newspaper

# ANKANA

## FORM-IV

(See Rule 8)

| | |
|---|---|
| 1. Place of publication | Bangalore<br>Karantaka State |
| 2. Periodicity of its publication | Bi–Monthly |
| 3. Printer's Name | B. Guru Murthy |
| Whether citizen of India if Foreigner state the Country of Origin | Yes |
| Address | ILA Printers<br>153, 8th cross,<br>4th Main<br>Chamarajapet<br>Bangalore-560 018 |
| 4. Publisher's Name | C. Srinivasa Raju |
| Whethar citizen of India if Foreigner state the country of Origin | Yes |
| Address | 8, "Chiranjeevi"<br>Old swimming pool<br>Road, Kodandarampura<br>Bangalore–560 003 |
| 5. Editor's Name | A. R. Nirupama |
| Whether citizen of India if Foreigner state the country | Yes<br>7 'Sri Matha'<br>15th cross, J.P. Nagar<br>V phase<br>Bangalore–560 078 |
| 6. Names ane Address of Individuals who own the Newspapers and Partners or Shareholders holding more than one percent of the capital | C. Srinivasa Raju<br>8, "Chiranjeevi"<br>Old Swimming pool<br>Road, Kodandarampura<br>Bangalore–560 003 |

I, C. Srinivasa Raju hereby declare that the particulars given above are true to the best of my knowledge and belief.

Bangalore
Date 1-3-1985

(Sd) **C. Srinivasa Raju**
Signature of Publisher

‘ಶ್ರೀರಂಗ’

**ವಿಶೇಷಾಂಕ**

(ಜುಲೈ-ಆಗಸ್ಟ್ ಸಂಚಿಕೆ)

**1985**

Published by C. Srinivasaraju 8 ‘Chiranjeevi’ Old Swimming pool Road Kodandarampura, Bangalore-560 003, Printed at ILA Printers 153, 4th Main, 8th Cross, Chamarajapet Bangalore-18. Editor A. R. Nirupama.

No. MAG (2) PO3 DECL 322/1979–80
ANKANA (Kannada Bi-monthly) March-April 1985

# ಕನ್ನಡ ನಾಡು, ನುಡಿಯು ಇತಿಹಾಸ ಭವ್ಯ ಅದರ ಪುನರುತ್ಥಾನಕ್ಕೆ ನಮ್ಮ ಯೋಜನೆಗಳು

ಕರ್ನಾಟಕ ತನ್ನದೇ ಆದ ಭವ್ಯ ಪರಂಪರೆಯುನ್ನು ಹೊಂದಿದೆ. ಈ ಪರಂಪರೆಯನ್ನು ಉಳಿಸಿ, ಬೆಳೆಸಿ, ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎರಡು ಪ್ರಮುಖ ಯೋಜನೆಗಳನ್ನು ಹಮ್ಮಿಕೊಂಡಿದೆ.

## 1. ಕನ್ನಡ ಅಭಿವೃದ್ಧಿ :—

ಈ ಯೋಜನೆಯಡಿ ತರಬೇತಿ ಶಿಬಿರಗಳು ಭಾಷಾಂತರ ಮತ್ತು ಪ್ರಕಟಣೆಗಳು ಹಾಗೂ ಇತರ ಪ್ರೋತ್ಸಾಹಕ ಯೋಜನೆಗಳನ್ನು ಹಮ್ಮಿಕೊಂಡಿದ್ದು, ಈ ಮೂಲಕ ರಾಜ್ಯದ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗದ ಎಲ್ಲ ಅಧಿಕಾರಿಗಳು ಮತ್ತು ನೌಕರರಿಗೆ ಆಡಳಿತ ಕನ್ನಡದಲ್ಲಿ ತರಬೇತಿ, ಎಲ್ಲ ಇಲಾಖೆಗಳ ಪಾರಿಭಾಷಿಕ ಶಬ್ದಕೋಶಗಳ ರಚನೆ, ಪರಿಷ್ಕರಣ ಹಾಗೂ ಅನುವಾದ, ಕನ್ನಡ ಬೆರಳಚ್ಚುಗಾರರು ಮತ್ತು ಶೀಘ್ರಲಿಪಿಗಾರರಿಗೆ ಪ್ರೋತ್ಸಾಹ, ಧನಸಹಾಯ ಮತ್ತು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಕೆಲಹಂತದಲ್ಲಿ ವಿದ್ಯಾರ್ಥಿವೇತನ ನೀಡಿಕೆ ಮುಂತಾದ ಕಾರ್ಯಕ್ರಮಗಳು.

## 2. ಸಾಹಿತ್ಯ ಮತ್ತು ಸಂಸ್ಕೃತಿ ಚಟುವಟಿಕೆಗಳು :—

ರಾಜ್ಯದಲ್ಲಿ ಸಾಹಿತ್ಯ, ನಾಟಕ, ಲಲಿತಕಲೆ, ಸಂಗೀತ, ನೃತ್ಯ, ಜಾನಪದ ಯಕ್ಷಗಾನ ಮತ್ತು ಉರ್ದು ಅಕಾಡೆಮಿಗಳು ಸ್ಥಾಪಿತಗೊಂಡಿವೆ. ಇವುಗಳ ಮೂಲಕ ಸಾಹಿತಿಗಳು ಕಲಾವಿದರಿಗೆ ಸೂಕ್ತ ಪ್ರೋತ್ಸಾಹ; ರಾಜ್ಯದ ಹೊರಗಡೆಯೂ ತಮ್ಮ ಪ್ರತಿಭೆ ತೋರಲು ಎಲ್ಲ ಅವಕಾಶ ಮತ್ತು ಪ್ರೋತ್ಸಾಹ; ಪುಸ್ತಕಗಳ ಪ್ರಕಟಣೆ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ವಿಚಾರ ಸಂಕಿರಣಗಳು ಲೇಖಕರಿಗೆ ಮತ್ತು ಕಲಾವಿದರಿಗೆ ಪ್ರಶಸ್ತಿ ನೀಡಿಕೆ, ಮಾಸಾಶನ ಮತ್ತು ಗೌರವಧನ ನೀಡಿಕೆ, ಲೇಖಕರು ಮತ್ತು ಕಲಾವಿದರ ವಿಶೇಷ ಜ್ಞಾನಾರ್ಜನೆಗಾಗಿ ಪ್ರವಾಸಾನುದಾನ, ವೈದ್ಯಕೀಯ ನೆರವು, ಹೊರನಾಡಿನ ಕನ್ನಡ ಸಂಘ ಸಂಸ್ಥೆಗಳ ಚಟುವಟಿಕೆಗಳಿಗೆ ಸಹಾಯಧನ, ರಂಗ ತರಬೇತಿ ಕಾರ್ಯಕ್ರಮ ತರಬೇತಿ ಶಿಬಿರಗಳು, ಗ್ರಂಥ ಭಂಡಾರಗಳಿಗೆ ಸಹಾಯ ಧನ ನೀಡಿಕೆ, ಮುಂತಾದ ಕಾರ್ಯಕ್ರಮಗಳು. ಇಷ್ಟೇ ಸಾಲದೆಂಬಂತೆ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಸ್ಥಾನವಾಗಿ ಬೆಂಗಳೂರಿನಲ್ಲಿ ರವೀಂದ್ರ ಕಲಾ ಕ್ಷೇತ್ರ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ರಂಗಮಂದಿರಗಳು.

ಈ ಎಲ್ಲ ಕಾರ್ಯಕ್ರಮಗಳಿಂದಾಗಿ ಕನ್ನಡ ಭಾಷೆ ಮತ್ತು ನಾಡಿನ ಭವ್ಯ ಪರಂಪರೆಯ ಪುನರ್‌ನಿರ್ಮಾಣವಾಗುತ್ತಲಿದೆ.

— ಕರ್ನಾಟಕ ವಾರ್ತೆ